| | | | |
|---|---|---|---|
| | 11. | ಮತದಾರರ ಚೀಟಿಗಳು - ಆಂಗ್ಲ | 50000 ಪ್ರತಿಗಳು |
| | 12. | ಚುನಾವಣಾ ಅಭ್ಯರ್ಥಿಗಳು ನೀಡಬೇಕಾದ ಮಾಹಿತಿಯ ನಮೂನೆಗಳು - ಕನ್ನಡ | 4500 ಪ್ರತಿಗಳು |
| | 13. | ಚುನಾವಣಾ ಅಭ್ಯರ್ಥಿಗಳು ನೀಡಬೇಕಾದ ಮಾಹಿತಿಯ ನಮೂನೆಗಳು - ಆಂಗ್ಲ | 2300 ಪ್ರತಿಗಳು |
| | 14. | ರಿಟರ್ನಿಂಗ್ ಆಫೀಸರ್ ಅವರ ಮುಂದೆ ಮಾಡುವ ಅಫಿಡವಿಯಟ್ - ಕನ್ನಡ | 1500ಪ್ರತಿಗಳು |
| | 15. | ರಿಟರ್ನಿಂಗ್ ಆಫೀಸರ್ ಅವರ ಮುಂದೆ ಮಾಡುವ ಅಫಿಡವಿಯಟ್ - ಆಂಗ್ಲ | 2500 ಪ್ರತಿಗಳು |
| | 16. | ವಯಸ್ಸಿನ ಬಗ್ಗೆ ಮತದಾರನಿಂದ ಘೋಷಣೆಯ ನಮೂನೆ (ಒಂದು ಕಡೆ ಕನ್ನಡ ಇನ್ನೊಂದು ಕಡೆ ಆಂಗ್ಲ) | 3000 ಪ್ರತಿಗಳು |
| 21. | | ಹಳೆಯ ಗೆಜೆಟ್ | 50 ಪ್ರತಿಗಳು |

**ಹರಾಜಿನಲ್ಲಿ ಭಾಗವಹಿಸುವವರು ಈ ಕೆಳಕಂಡ ಷರತ್ತುಗಳನ್ನು ಪಾಲಿಸಬೇಕು**

1. ಪ್ರತಿಯೊಬ್ಬ ಆಸಕ್ತ ಹರಾಜುದಾರರು ಹರಾಜಿನಲ್ಲಿ ಭಾಗವಹಿಸುವುದಕ್ಕೆ ಮೊದಲು ಮುಂಗಡ ಹಣ ಠೇವಣಿಯಾಗಿ ರೂ.500-00 (ಐದು ನೂರು) ಕಛೇರಿಯಲ್ಲಿ ನಗದಾಗಿ ಪಾವತಿ ಮಾಡಬೇಕು.
2. ಹರಾಜು ದರವನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರವು ಕೆಳಗೆ ಸಹಿ ಮಾಡಿರುವವರಿಗೆ ಇರುತ್ತದೆ.
3. ವಿಜೇತರ ಹರಾಜು ದರವನ್ನು ಒಪ್ಪಿಕೊಂಡ ನಂತರ ಹರಾಜಿನಲ್ಲಿ ಭಾಗವಹಿಸಿದ ಇತರರ ಮುಂಗಡ ಹಣವನ್ನು ಹಿಂದಿರುಗಿಸಲಾಗುವುದು.
4. ವಿಜೇತ ಹರಾಜುದಾರರು ಹರಾಜು ಮುಗಿದ ತಕ್ಷಣವೇ ಹರಾಜು ಮೊತ್ತದ ಶೇಕಡ 75ರ ಮೊತ್ತವನ್ನು ಅಥವಾ ಪೂರ್ತಿ ಹಣವನ್ನು ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
5. ಅದಲ್ಲದೆ, ವಿಜೇತ ಹರಾಜುದಾರರು ಕಾಗದ ಸರಕನ್ನು ಕೊಳ್ಳಲು ಕಿಲೋ ಗ್ರಾಂ ನಂತೆ ಅನುಮೋದಿತ ತಕ್ಕಡಿ ಅಥವಾ ವೇಯಿಂಗ್ ಯಂತ್ರ (Weighing Machine) ವನ್ನು ಕಛೇರಿಗೆ ತರತಕ್ಕದ್ದು.

ಈ ಕೆಳಗೆ ರುಜು ಮಾಡಿರುವ ಅಧಿಕಾರಿಯವರ ತೀರ್ಮಾನವೇ ಅಂತಿಮ ನಿರ್ಧಾರವಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 697

**ಎಚ್.ಸಿ. ನಾಗೇಂದ್ರ**

ಜಂಟಿ ಮುಖ್ಯ ಚುನಾವಣಾಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ, ಸಿ.ಆ.ಸು.ಇ. (ಚುನಾವಣೆಗಳು).

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ಉಪನಿರ್ದೇಶಕರವರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು-1

## ಟೆಂಡರ್ ಪ್ರಕಟಣೆ

## ಸಂಖ್ಯೆ: ತೋನಿ:ಕಉ:ವಿನಿ2:52:2003-2004, ದಿನಾಂಕ: 23ನೇ ಅಕ್ಟೋಬರ್ 2003

ಕಬ್ಬನ್ ಉದ್ಯಾನವನದ ರಾಣಿ ಪಾರ್ಕ್‌ನಲ್ಲಿ ಹುಲ್ಲುಹಾಸನ್ನು ಅಭಿವೃದ್ಧಿಪಡಿಸಲು ಲಾಲ್‌ಬಾಗ್ ಭೂ ದೃಶ್ಯ ವಿಭಾಗದವರು ನೀಡಿರುವ ನಕ್ಷೆಯಂತೆ ನವೀಕರಿಸಬೇಕಾಗಿರುತ್ತದೆ. ಅಧಿಕೃತ ಗುತ್ತಿಗೆದಾರರು ಈ ಕೆಳಗೆ ಸೂಚಿಸಿದ ವಿವರಗಳಂತೆ ರಾಣಿ ಪಾರ್ಕನ್ನು ನವೀಕರಿಸಿ ಕೊಡಲು ನಿಮ್ಮ ಟೆಂಡರ್ ಅನ್ನು ಮೊಹರಾದ ಲಕೋಟೆಯಲ್ಲಿಟ್ಟು ದಿನಾಂಕ: 22.11.2003 ರಂದು ಸಂಜೆ 4.00 ಗಂಟೆಯೊಳಗೆ ಈ ಕಛೇರಿಗೆ ನೀಡಲು ಕೋರಿದೆ.

| ವಿವರಗಳು | ಪ್ರಮಾಣ | ದರ ರೂ.ಗಳಲ್ಲಿ |
|---|---|---|
| 1. ಶ್ರಬ್ಸು<br>ಭೂಮಿಯನ್ನು 1 1/2 X 1 1/2 X 1 1/2 ಅಡಿ ಆಳಕ್ಕೆ ಅಳತೆ ಮಾಡಿ ಕೆಂಪುಮಣ್ಣು, ಮರಳು, ಗೊಬ್ಬರವನ್ನು ಮಿಶ್ರಣ ಮಾಡಿ 1:2:5: ರಂತೆ ವಿವಿಧ ಜಾತಿಯ ಗಿಡಗಳನ್ನು ನೆಟ್ಟು ಸಮತಟ್ಟು ಮಾಡುವುದು (ಅಳತೆ ಮತ್ತು ಗಿಡಗಳು ಸೇರಿದಂತೆ). | 300 ಸಂಖ್ಯೆ | |
| 2. ಫ್ಲವರ್ ಬೆಡ್ಸ್<br>1 1/2 ಅಡಿ ಆಳಕ್ಕೆ ಅಗೆತ ಮಾಡಿ ಮಣ್ಣು ಗೊಬ್ಬರ ಮರಗಳನ್ನು ಮಿಶ್ರಣ ಮಾಡಿ ವಿವಿಧ ಜಾತಿಯ ಹೂವಿನ ಬೀಜಗಳನ್ನು ಅಥವಾ ಹೂವಿನ ಗಿಡಗಳನ್ನು ನೆಟ್ಟು ಭೂಮಿಯನ್ನು ಸಮತಟ್ಟು ಮಾಡಲು | 14.86 ಚ.ಮೀ. | |
| 3. ಹೆಜ್ಜ್ ಫಾರ್ಮೇಷನ್:<br>ಹುಲ್ಲು ಹಾಸಿನ ಸುತ್ತಲೂ 1 1/2 X 1 1/2 ಅಡಿ ಅಳತೆಯ ಟ್ರೆಂಚಿಂಗ್ ಮಾಡಿ ನಂತರ 1:2:3 ರ ಪ್ರಮಾಣದಲ್ಲಿ ಮಣ್ಣು, ಮರಳು ಮತ್ತು ಗೊಬ್ಬರವನ್ನು ಮಿಶ್ರಣ ಮಾಡಿ 1.0 ಅಡಿ ಅಂತರದಲ್ಲಿ ಬೆಲ್ ಜಾತಿಯ ಗಿಡಗಳನ್ನು ನೆಟ್ಟು ಭೂಮಿಯನ್ನು ಸಮತಟ್ಟು ಮಾಡಲು (ಅಗೆತ ಮಾಡಿರುವುದಕ್ಕೆ ಗಿಡದ ದರವು ಸೇರಿದಂತೆ) | 137.16 ಚ.ಮೀ. | |

| ವಿವರಗಳು | ಪ್ರಮಾಣ | ದರ ರೂ.ಗಳಲ್ಲಿ |
|---|---|---|
| 4. ಹುಲ್ಲುಹಾಸು ನವೀಕರಣ: ಜಾಗದ ಸ್ವಚ್ಛತೆ ಹಾಗೂ ಅನಾವಶ್ಯಕವಾಗಿ ಬೆಳೆದ ಕಳೆ ಗಿಡಗಳನ್ನು ಬೇರು ಸಹಿತ ತೆಗೆದು ಹಾಕುವುದು (1 1/2 ಅಡಿ) ಆಳತೆಯ ಮಣ್ಣನ್ನು ತೆಗೆದು ಕೆಂಪುಮಣ್ಣು, ಮರಳು, ಕುದುರೆ ಗೊಬ್ಬರ ಬೇವಿನ ಹಿಂಡಿಯನ್ನು ಮಿಶ್ರಣ ಮಾಡಿ ಭೂಮಿಯನ್ನು ಸಮತಟ್ಟು ಮಾಡಿ 5 ಸಿ.ಎಂ. 5 ಸಿ.ಎಂ. ಆಳತೆಯಲ್ಲಿ ಅಮೇರಿಕನ್ ಬರ್‌ಮುಡ್ ಹುಲ್ಲನ್ನು ನೆಡಲು. ಇತರೆ. | 4170 ಚ.ಮೀ. | |

**ನಿಬಂಧನೆ ಮತ್ತು ಷರತ್ತುಗಳು**

1. ಟೆಂಡರ್ ಫಾರಂ ಜೊತೆಯಲ್ಲಿ ರೂ.8000-00 ಗಳ ಇಎಂಡಿ ಯನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ನಿರ್ದೇಶಕರು, ತೋಟಗಾರಿಕೆ ಇಲಾಖೆ ರವರಿಗೆ ಸಂದಾಯವಾಗುವಂತೆ ಪಡೆದು ಸಲ್ಲಿಸಬೇಕು. ಡಿ.ಡಿ. ಇಲ್ಲದಿದ್ದ ಪಕ್ಷದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
2. ಟೆಂಡರ್ ಫಾರಂಗಳನ್ನು ಸೀಲ್ ಮಾಡಿರಬೇಕು ಹಾಗೂ 2003-2004ನೇ ಸಾಲಿನಲ್ಲಿ 'ಕ್ವೀನ್ಸ್' ಪಾರ್ಕಿನ ಹುಲ್ಲುಹಾಸು ನವೀಕರಣ ಎಂದು ಬರೆದಿರಬೇಕು.
3. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ದಿನಾಂಕ: 20.11.2003 ರಿಂದ 21.11.2003 ರವರೆಗೆ ರೂ.500-00 ಗಳನ್ನು ಪಾವತಿಸಿ ಪಡೆಯಬಹುದು.
4. ಟೆಂಡರ್ ಫಾರಂಗಳನ್ನು ಈ ಕಛೇರಿಗೆ ಸಲ್ಲಿಸುವ ಕಡೆಯ ದಿನಾಂಕ: 22.11.2003 ರಂದು ಸಂಜೆ 4.00 ಗಂಟೆಯ ವರೆಗೆ ನಂತರ ಅವಧಿ ಮೀರಿ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು. ಹಾಗೂ ಅಂದೇ 5.00 ಗಂಟೆಗೆ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.
5. ಯಶಸ್ವಿ ಟೆಂಡರ್‌ದಾರರು ಉದ್ಯಾನವನದ ನವೀಕರಣದ ನಂತರದ 6 ತಿಂಗಳ ಕಾಲ ನಿರ್ವಹಣೆ ಮಾಡಬೇಕಾಗಿರುತ್ತದೆ.
6. ಹೆಚ್ಚಿನ ವಿಷಯಗಳಿಗೆ ವಿವರಗಳನ್ನು ಈ ಕಛೇರಿಯಲ್ಲಿ ಕಛೇರಿ ಸಮಯದಲ್ಲಿ ಪಡೆಯಬಹುದು.
7. ಟೆಂಡರ್‌ಗಳು ಸ್ವೀಕರಿಸುವ ಹಾಗೂ ತಿರಸ್ಕರಿಸುವ ಅಂತಿಮ ತೀರ್ಮಾನ ನಿರ್ದೇಶಕರು ಲಾಲ್‌ಬಾಗ್ ಬೆಂಗಳೂರು ರವರದೇ ಅಂತಿಮ ತೀರ್ಮಾನವಾಗಿರುತ್ತದೆ.
8. ಟೆಂಡರ್‌ದಾರರು ಇನ್‌ಕಮ್‌ಟ್ಯಾಕ್ಸ್ ಕ್ಲಿಯರೆನ್ಸನ್ನು ಟೆಂಡರ್‌ನೊಂದಿಗೆ ಲಗತ್ತಿಸಿರಬೇಕು.
9. ಯಶಸ್ವಿ ಟೆಂಡರ್‌ದಾರರು ರೂ.2.00 ಲಕ್ಷ ಮೌಲ್ಯದ ಬ್ಯಾಂಕ್ ಗ್ಯಾರಂಟಿಯನ್ನು ನೀಡಬೇಕು. ಇದನ್ನು ಗುತ್ತಿಗೆ ಅವಧಿ ನಂತರ ಹಿಂದಿರುಗಿಸಲಾಗುವುದು.
10. ಕಳೆದ ಎರಡು ಸಾಲಿನಲ್ಲಿ ಸದರಿ ಕೆಲಸ ಮಾಡಿರುವ ಬಗ್ಗೆ ಅನುಭವ ದೃಢೀಕರಣ ಪತ್ರ ನೀಡಬೇಕು.
11. ಆದಾಯ ತೆರಿಗೆ ಹಾಗೂ ಮಾರಾಟ ತೆರಿಗೆಯ ಅನ್ವಯವಾದಲ್ಲಿ ನಿಯಮದಂತೆ ಬಿಲ್ಲಿನ ಮೂಲದಲ್ಲಿ ಕಟಾಯಿಸಲಾಗುವುದು.
12. ಹೆಚ್ಚಿನ ವಿಷಯಗಳಿಗೆ ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಕಬ್ಬನ್ ಉದ್ಯಾನವನ, ಬೆಂಗಳೂರು ರವರ ಕಛೇರಿಯಲ್ಲಿ ಸಂಪರ್ಕಿಸಿ ಮಾಹಿತಿ ಪಡೆಯಬಹುದು.
13. ಟೆಂಡರ್‌ದಾರರು ಯಾವುದೇ ಷರತ್ತುಗಳನ್ನು ವಿಧಿಸುವಂತಿಲ್ಲ.

ತೋಟಗಾರಿಕೆ ಉಪನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು-1.

ಪಿ.ಆರ್. 698

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-04**

**ತರಕಾರಿ ಬೀಜಗಳ ಸರಬರಾಜಿಗಾಗಿ ಟೆಂಡರ್ ಪ್ರಕಟಣೆ**

**ಸಂಖ್ಯೆ: ತೋಇ:ಅಭಿವಿ:ಸತೋಅ1:16:2003-04, ದಿನಾಂಕ: 4ನೇ ನವೆಂಬರ್ 2003**

2003-2004ನೇ ಸಾಲಿಗೆ ಕರ್ನಾಟಕ ರಾಜ್ಯ ತೋಟಗಾರಿಕೆ ಇಲಾಖೆಗೆ ಬರಪರಿಹಾರ ಕಾಮಗಾರಿಯಡಿ ರೂ.50 ಲಕ್ಷ ಮೊತ್ತದ ವಿವಿಧ ಜಾತಿಯ ಸುಧಾರಿತ ತಳಿಗಳ ತರಕಾರಿ ಬೀಜಗಳನ್ನು ಸರಬರಾಜು ಮಾಡಲು ನೈಜ ಕಂಪನಿದಾರರಿಂದ / ಉತ್ಪಾದಕರಿಂದ ಟೆಂಡರ್ ಆಹ್ವಾನಿಸಲಾಗಿದೆ. ಟೆಂಡರ್‌ದಾರರು ಟೆಂಡರ್ ದಾಖಲಾತಿಯನ್ನು ತೋಟಗಾರಿಕೆ ಜಂಟಿ ನಿರ್ದೇಶಕರು (ಅಭಿವೃದ್ಧಿ) ಲಾಲ್‌ಬಾಗ್, ಬೆಂಗಳೂರು ರವರ ಕಛೇರಿಯಲ್ಲಿ ರೂ.100/- ನೀಡಿ ಪಡೆದು, ವಿವರಗಳನ್ನು ಭರ್ತಿ ಮಾಡಿ ದಿನಾಂಕ: 3.12.2003 ರಂದು ಸಂಜೆ 4.00 ಘಂಟೆಯೊಳಗೆ ತೋಟಗಾರಿಕೆ ನಿರ್ದೇಶನಾಲಯ ಲಾಲ್‌ಬಾಗ್, ಬೆಂಗಳೂರುರವರಿಗೆ ಸಲ್ಲಿಸಬೇಕು. ನಿಗದಿತ ಟೆಂಡರ್ ದಾಖಲಾತಿಯನ್ನು ತೋಟಗಾರಿಕೆ ಜಂಟಿ ನಿರ್ದೇಶಕರು (ಅಭಿವೃದ್ಧಿ), ಲಾಲ್‌ಬಾಗ್, ಬೆಂಗಳೂರು ರವರ ಕಛೇರಿಯಲ್ಲಿ ದಿನಾಂಕ: 2.12.2003 ರಂದು ಸಂಜೆ 5.00 ಗಂಟೆಯವರೆಗೆ ಪಡೆಯಬಹುದಾಗಿದೆ. ಟೆಂಡರ್‌ದಾರರು ಟೆಂಡರ್ ಜೊತೆಗೆ ರೂ.50,000-00 ಗಳ ಭದ್ರತಾ ಠೇವಣಿಯನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಸಲ್ಲಿಸಬೇಕು. ಟೆಂಡರ್‌ಗಳನ್ನು ದಿನಾಂಕ: 4.12.2003

ರಂದು ಬೆಳಿಗ್ಗೆ 11.00 ಗಂಟೆಗೆ ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರಿನಲ್ಲಿ ತೆರೆಯಲಾಗುವುದು. ಹೆಚ್ಚಿನ ವಿವರಗಳಿಗೆ ತೋಟಗಾರಿಕೆ ಜಂಟಿ ನಿರ್ದೇಶಕರು (ಅಭಿವೃದ್ಧಿ) ಲಾಲ್‌ಬಾಗ್, ಬೆಂಗಳೂರು ರವರನ್ನು ಸಂಪರ್ಕಿಸುವುದು. (ದೂರವಾಣಿ: 6572324).

ತೋಟಗಾರಿಕೆ ನಿರ್ದೇಶಕರು,
ಲಾಲ್‌ಬಾಗ್, ಬೆಂಗಳೂರು.

ಪಿ.ಆರ್. 701

**ಉಪ ನಿರ್ದೇಶಕರ ಕಛೇರಿ,**

**ರಾಷ್ಟ್ರೀಯ ಸಂಯೋಜಿತ ಕುಕ್ಕುಟ ತಳಿವರ್ಧನಾ ಯೋಜನೆ, ರಾಜ್ಯ ಕುಕ್ಕುಟ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-560 089**

**ಹರಾಜು ಪ್ರಕಟಣೆ**

**ಸಂಖ್ಯೆ: ಉನಿ:ರಾಕುಕ್ಷೇ:ಹೆ:ಪ್ಲಾಚಿಹ:2003-04, ದಿನಾಂಕ: 21ನೇ ಅಕ್ಟೋಬರ್ 2003**

ಈ ಮೂಲಕ ಸಮಸ್ತ ಜನರಿಗೆ ತಿಳಿಸುವುದೇನೆಂದರೆ, ರಾಜ್ಯ ಕುಕ್ಕುಟ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-560089 ರಲ್ಲಿ 3875 ಖಾಲಿ ಪ್ಲಾಸ್ಟಿಕ್ ಚೀಲಗಳು (ಕೋಳಿ ಆಹಾರ) ಎಲ್ಲಿವೆಯೋ, ಹೇಗಿವೆಯೋ ಹಾಗೆ ಈ ಕ್ಷೇತ್ರದ ಆವರಣದಲ್ಲಿ ದಿನಾಂಕ: 28.11.2003 ರಂದು ಬೆಳಿಗ್ಗೆ 11.00 ಗಂಟೆಗೆ (ಬುಧವಾರ) ಬಹಿರಂಗವಾಗಿ ಹರಾಜು ಮಾಡಲಾಗುತ್ತದೆ.

ಆದ್ದರಿಂದ ಆಸಕ್ತರು ಭಾಗವಹಿಸಬಹುದು. ಇತರೆ ನಿಬಂಧನೆಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಡಾ: ಎಸ್. ಮಾರಿಮುತ್ತು**
ಉಪ ನಿರ್ದೇಶಕರು,
ರಾಜ್ಯ ಕುಕ್ಕುಟ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89.

ಪಿ.ಆರ್. 687

**KARNATAKA STATE BOARD OF WAKFS**

**"DARUL AWKAF," No.6, Cunningham Road, Bangalore-52**

**CERTIFICATE OF REGISTRATION**

**No. KBW/2/REG/SMA/2000-2001, Dated: 27th November 2000**

It is hereby certified that the Wakf described hereunder is registered and brought on to the Register of Wakfs in accordance with Section 36 of the Wakf Act, 1995.

| Sl.No. of Kitabul Awkaf | Name, Class & Description of the Wakfs | Particulars of Wakf properties | Name of the Muthawalli |
|---|---|---|---|
| 181. | Addl. Wakf Property of Jamia Masjid, (Sunni), Sakrebylu Village, Shimoga District. | Land in Sy.No.2/IC, Extent - 2 Acres At Gajanur State Forest Village, Nidigi II Hobli, Shimoga Taluk, Shimoga District. | The President, Jamia Masjid, Sakrebylu Village, Shimoga Taluk & District. |

**BOUNDARIES**

East : Land of Smt. Shantamma.
West : Shimoga - Thirthahalli Road.
North : Gomala.
South : Garden Land of Smt. Poothathamini H.V. Manjunatha Gowda.

Chief Executive Officer,
Karnataka State Board of Wakfs.

PD. 78

**FORM NO. I**

**(See Rule 9)**

**DEPARTMENT OF SUBORDINATE JUDICIARY**

**OFFICE OF THE CITY CIVIL COURT, COURT COMPLEX, BANGALORE-9**

**NOTIFICATION**

**No. ADM-1A/950/2003, Dated: 22nd October 2003**

**Sri K.S. Balakrishna,** working as Typist-Copyist in City Civil Court, Bangalore is permitted to change his name to **"K.S. BHALAKRISHNA".**

**K.N. KESHAVANARAYANA**
Principal City Civil & Sessions Judge, Bangalore.

PD. 157

**FORM - IV**

**(See Rule 12)**

**NOTICE**

It is hereby notified that the undersigned has changed his/her name from **AMEENAPPA AMAGOND MADAR** to **AMEENAPPA AMAGOND AIHOLLI.**

**AMEENAPPA AMAGOND AIHOLLI**

PD. 158

**FORM-IV**
**(See Rule 12)**
**NOTICE**

It is hereby notified that the undersigned has changed his/her name from **RAJENDRA BHEEMARAO KATTI / RAJENDRA B. KATTI / R.B. KATTI** to **RAJU B. KATTI**

PD. 155 **RAJU B. KATTI**

**FORM-IV**
**(See Rule 12)**
**NOTICE**

It is hereby notified that the undersigned has changed his/her name from **DR. BRUFF DAS** to **DR. PRABHU DAS**

PD. 156 **DR. PRABHU DAS**

**ನಮೂನೆ-1**
**(9ನೇ ನಿಯಮ ನೋಡಿ)**
**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು**
**ಅಧಿಸೂಚನೆ**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಪ್ರಾಥಮಿಕ ಆರೋಗ್ಯ ಕೇಂದ್ರ ಬನಗಾಂವ ಬೆಳಗಾವಿ ಇಲ್ಲಿ ಕಿರಿಯ ಆರೋಗ್ಯ ಸಹಾಯಕ (ಪ್ರ) (ಕು) ಆಗಿ ಕೆಲಸ ಮಾಡುತ್ತಿರುವ ಶ್ರೀಮತಿ ಎಸ್.ವಾಯ್. ಟಿಸಗಪ್ಪಗೋಳ ರವರಿಗೆ ಅವರ ಹೆಸರನ್ನು ಎಸ್.ವಾಯ್. ಕುರಿ ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ನಿರ್ದೇಶಕರು,
ಪಿ.ಡಿ. 159 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

**PUBLIC WORKS DEPARTMENT**
**OFFICE OF THE EXECUTIVE ENGINEER, NATIONAL HIGHWAY DIVISION**
**Urva Store, Ashoknagar, Mangalore - 575006**
**TENDER CUM PUBLIC AUCTION NOTIFICATION**
**FOR DISPOSAL OF SCRAP MACHINERIES**
**No. NHD:MNG:AE1:MECH:BER:2003-04:4992, Dated: 16th October 2003**

Sealed tenders (in duplicate) are invited from the public for the disposal of D.R.R. ABF-351 in "as is and where is condition"parked in the places shown below and the details are as follows:-

This is second call.

| Sl. No. | Description of parked place of the vehicle. | quan-tity | Assessed Value | Deposit (to be paid in cash or in the form of D.D.) | Cost of tender document including taxes (non-refundable to be paid in cash or DD) | Last date for receipts of application | Date of issue of blank tender schedule | Last date for receipt of Sealed tenders | Date of Public Auction. |
|---|---|---|---|---|---|---|---|---|---|
| 1) | D.R.R. ABF - 351 (Kept in Store yard of National Highway sub-Division Kundapura). | One No. | Confidential | Rs.1,000/- | Rs.250/- | 15-11-2003 | 17-11-2003 | 18-11-2003 upto 4.00 PM. | 19-11-2003 at 11.00 AM. in National Highway Division, Mangalore |

**NOTE:**

1) Tenders should be in the prescribed form obtainable from this office on payment of Rs.250/- for each machinery (non-refundable) by cash, before the due date. Tender forms will not be sent by post.
2) Application for requisition of blank tender forms will be received from the public upto 15.11.2003. The blank tender forms will be issued on 17.11.2003 during office hours.
3) Filled up tenders should be kept in a sealed cover along with a deposit of Rs.1,000/- and an amount equal to 50% of the quoted amount + 5% KST in the form of Demand Draft in favour of Executive Engineer, National Highway Division, Mangalore. If it is not possible to onclose D.D. for 50% of the amount along with tender, the tenderer should be present at the time of opening the

tenders to remit the said amount if his tender Happens to be highest. If the tenderer fail either to enclose the D.D. for 50% of the tendered amount or to be present at the time of auction and remit the 50% of the tendered amount, his tender will be liable for rejection though his tender happens to be the highest. Tenders will be received in this office upto 4.00 PM. on 18.11.2003. The tenderer should clearly mention over the sealed cover as "Tender for the disposal of "DRR-ABF-351" without fail. Sealed tenders will be opened by the Executive Engineer, National Highway Division, Mangalore, in the presence of the tenderers on 19.11.2003 after the completion of public auction to be conducted at 11.00 AM. If it is not possible to open the tender on the said date, next convenient date will be informed.

4) If the above mentioned dates happens to be holidays, next working dates will holds good.
5) Final acceptance of tender rests with the competent authority who reserves the right to accept or reject any or all tenders without assigning any reason thereof.
6) Further, a PUBLIC AUCTION will be conducted on 19.11.2003 at 11.00 AM in the Office of the Executive Engineer, National Highway Division, Mangalore, in which any person including those who have submitted the tenders can participate but only after depositing the E.M.D. amount of Rs.1,000/- for each machinery before the commencement of the public auction.
7) The successful bidder should pay 50% of the bidded amount + 5% K.S.T. of the said amount on the spot.
8) The machineries can be inspected by the willing public during working hours. They can contact Assistant Executive Engineer, National Highway Sub-Division, Kundapura for further informations regarding inspection of machineries etc.,

**B.S. BALAKRISHNA**
P.R. 688 Executive Engineer,
National Highway Division, Mangalore.

**ಕರ್ನಾಟಕ ಲೋಕ ಸೇವಾ ಆಯೋಗ**

**ಲೋಕ ಸೇವಾ ಆಯೋಗದ ಕಛೇರಿ, "ಪಾರ್ಕ್ ಹೌಸ್" ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಪಿಎಸ್‌ಸಿ 02 ಆರ್‌ಟಿಬಿ 1997, ದಿನಾಂಕ: 28ನೇ ಅಕ್ಟೋಬರ್ 2003**

ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 45 ಸೆನೆನಿ 2003, ದಿನಾಂಕ: 02.07.2003 ರನ್ವಯ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಲ್ಲಿನ 01 ಗ್ರಂಥಪಾಲಕರ ಹುದ್ದೆಗಾಗಿ ಗ್ರಾಮೀಣ ಕೃಪಾಂಕ ರಹಿತ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಇದೇ ಸಮಸಂಖ್ಯೆಯ ಅಧಿಸೂಚನೆ ದಿನಾಂಕ: 19.09.2003 ರಂದು ಪ್ರಕಟಿಸಿದ್ದು, ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಅವುಗಳನ್ನು ಸದರಿ ಅಧಿಸೂಚನೆಯನ್ನು ಪ್ರಕಟಿಸಿದ 30 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿತ್ತು. ಯಾವ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ಕರ್ನಾಟಕ ರಾಜ್ಯ ನಾಗರೀಕ ಸೇವಾ (ನೇರ ನೇಮಕಾತಿ ಮೂಲಕ ಆಯ್ಕೆ) ನಿಯಮಗಳು 1973ರ ನಿಯಮ-7 ರನ್ವಯ ಪರಿಷ್ಕೃತ ಅಂತಿಮ ಆಯ್ಕೆಪಟ್ಟಿ ಈ ಕೆಳಕಂಡಂತಿದೆ:-

ನೇಮಕಾತಿ ಪ್ರಾಧಿಕಾರ :: ಸರ್ಕಾರ
ಇಲಾಖೆಯ ಹೆಸರು :: ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ

| ಕ್ರ.ಸಂ. | ಅಭ್ಯರ್ಥಿಯ ಹೆಸರು / ವಿಳಾಸ / ಸಂದರ್ಶನ ಸಂಖ್ಯೆ | ಜನ್ಮ ದಿನಾಂಕ | ಮೀಸಲಾತಿ | ವಿದ್ಯಾರ್ಹತೆ |
|---|---|---|---|---|
| **ಮುಖ್ಯ ಪಟ್ಟಿ** | | | | |
| (1) | ಶ್ರೀ ಕೃಷ್ಣಮೂರ್ತಿ ಎನ್.ಟಿ. (03) ಬಿನ್ ತಿಮ್ಮಯ್ಯ, ಹಳೇ ನಿಜಗಲ್, ದೇವರ ಹೊಸಹಳ್ಳಿ ಅಂಚೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ-562111. | 30.06.1967 | ಸಾಮಾನ್ಯ ಅರ್ಹತೆ | ಬಿ.ಎಲ್.ಐ.ಎಸ್. |
| **ಹೆಚ್ಚುವರಿ ಪಟ್ಟಿ** | | | | |
| (1) | ಶ್ರೀಮತಿ ನಳಿನಿ ಗುರುರಾಜ್ (04) 3/62, ಶ್ರೀ ನಿಲಯ, 5ನೇ ಕ್ರಾಸ್, 8ನೇ ಮೈನ್, ಬನಶಂಕರಿ 1ನೇ ಸ್ಟೇಜ್, ಬೆಂಗಳೂರು-560050. | 25.11.1958 | ಸಾಮಾನ್ಯ ಅರ್ಹತೆ | ಬಿ.ಎಲ್.ಎಸ್. |

**ಟಿಪ್ಪಣಿ:-** ಈ ಆಯ್ಕೆಪಟ್ಟಿಯಲ್ಲಿ ಆಯ್ಕೆಯಾಗಿರುವ ಎಲ್ಲಾ ಅಭ್ಯರ್ಥಿಗಳ ಆಯ್ಕೆಯು ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ: 3534/1998ರ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರುತ್ತದೆ.

ಬಿ.ಎ. ಹರೀಶ್ ಗೌಡ
ಪಿ.ಆರ್. 690 ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ.

**KARNATAKA STATE BOARD OF WAKFS**
**"DARUL AWKAF", N0.6, CUNNINGHAM ROAD, BANGALORE-52**
**NOTIFICATION No. KTW/MSC/39/GBA/2002-2003, dated: 6th November 2003**

**Sub:** Mortgage of land in Sy.No.34 Brahamapur Village belonging to Dargah Hazrath Khaja Banda Nawaz (RA).

**Ref:** Application No in Form No.59 (Rule 44) of Muthawalli of Dargah Hazrath Khaja Banda Nawaz (RA), Gulbarga.

Whereas the Muthawalli of Dargah Hazrath Khaja Banda Nawaz (RA) Wakf Institution has made an application to the Board under Section 51 (1) of the Wakf Act, 1995, to Gift/Sale/Exchange/Wakf shown in the schedule below:

**SCHEDULE**

| Sl. No. | Details of immovable property | Location | Sy.No. property No. | Extent | Boundaries |
|---|---|---|---|---|---|
| 1. | Dargah Hazrath Khaja Banda Nawaz (RA) | Brahamapur | Sy.No.34 CTS No.2845 | A.G. 8.7 | North: Public Road.<br>South: -do-<br>East: -do-<br>West: Main Road to Railway Station & Shops. |

It is hereby notified for the information of any person interested in the wakf to file objections/suggestions, if any, with regard to the above transaction addressed to the Chief Executive Officer, Karnataka State Board of Wakfs, Bangalore, within fifteen days from the date of publication of this Notification published in official Gazette.

Chief Executive Officer,
Karnataka State Board of Wakfs.

PD. 80

**ಕರ್ನಾಟಕ ಭವನ, ನವದೆಹಲಿ**

**ಅಧಿಸೂಚನೆ ಸಂಖ್ಯೆ: ಆರ್.ಸಿ.ಕೆ:ಎಸ್.ಇ.ಎಸ್:24:ಆಡಳಿತ:2003-04, ದಿನಾಂಕ: 22ನೇ ಸೆಪ್ಟೆಂಬರ್ 2003**

**ವಿಷಯ:** ನಿವಾಸಿ ಆಯುಕ್ತರವರ ಕಛೇರಿ, ಕರ್ನಾಟಕ ಭವನ, ನಂ.10, ಕೌಟಿಲ್ಯ ಮಾರ್ಗ, ಚಾಣಕ್ಯಪುರಿ, ನವದೆಹಲಿ ಇಲ್ಲಿನ ವಾಹನ ಚಾಲಕರ ಬ್ಯಾಕ್‌ಲಾಗ್ (ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಮಾತ್ರ) ಹುದ್ದೆಗೆ ನೇಮಕಾತಿಗಾಗಿ ಅರ್ಜಿ ಆಹ್ವಾನ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ:13:ಎಸ್‌ಬಿಸಿ:2001, ದಿನಾಂಕ: 21.11.2001.

ನವದೆಹಲಿಯ ಕರ್ನಾಟಕ ಭವನದಲ್ಲಿ ಖಾಲಿಯಿರುವ ವಾಹನ ಚಾಲಕರ ಬ್ಯಾಕ್‌ಲಾಗ್ (ಪರಿಶಿಷ್ಟ ಪಂಗಡ) ಹುದ್ದೆಯನ್ನು ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿ ಕರೆಯಲಾಗಿದೆ. ಅಭ್ಯರ್ಥಿ ಕಡ್ಡಾಯವಾಗಿ ಕನ್ನಡ ಓದಲು ಮತ್ತು ಬರೆಯಲು ಮಾತನಾಡಲು ಸಮರ್ಥರಾಗಿರಬೇಕು. ಕರ್ನಾಟಕದಲ್ಲಿ ವಾಸಿಸುವ ಅಭ್ಯರ್ಥಿಗಳು ಸರ್ಕಾರದ ಮುದ್ರಣ ಮಳಿಗೆ, ಬೆಂಗಳೂರು ಅಥವಾ ಜಿಲ್ಲಾ ಕೇಂದ್ರಗಳಲ್ಲಿನ ಸರ್ಕಾರದ ಪುಸ್ತಕ ಮಳಿಗೆ ಅಥವಾ ಅಧಿಕೃತ ಮಾರಾಟಗಾರರಿಂದ ಹಾಗೂ ನವದೆಹಲಿಯಲ್ಲಿನ ನಿವಾಸಿಗಳು ಮೇಲ್ಕಾಣಿಸಿದ ವಿಳಾಸದಲ್ಲಿ ಅರ್ಜಿಗಳನ್ನು ದ್ವಿ-ಪ್ರತಿಯಲ್ಲಿ ಪಡೆದುಕೊಂಡು ಅಭ್ಯರ್ಥಿಯ ಸ್ವಂತ ಬರವಣಿಗೆಯಲ್ಲಿ ಭರ್ತಿ ಮಾಡಿದ ದ್ವಿ-ಪ್ರತಿ ಅರ್ಜಿಗಳನ್ನು ನಿವಾಸಿ ಆಯುಕ್ತರು, ಕರ್ನಾಟಕ ಭವನ, 10, ಕೌಟಿಲ್ಯ ಮಾರ್ಗ, ಚಾಣಕ್ಯಪುರಿ, ನವದೆಹಲಿ - 110 021 ಇಲ್ಲಿಗೆ ನೋಂದಾಯಿತ ಅಂಚೆ ಮೂಲಕ ಸಲ್ಲಿಸತಕ್ಕದ್ದು.

| | | |
|---|---|---|
| ಹುದ್ದೆಯ ಹೆಸರು | : | ವಾಹನ ಚಾಲಕ |
| ವೇತನ ಶ್ರೇಣಿ | : | ರೂ. 3000-5450 |
| ಖಾಲಿಯಿರುವ ಹುದ್ದೆಗಳ ಸಂಖ್ಯೆ | : | ಒಂದು |
| ವಿದ್ಯಾರ್ಹತೆ | : | 1) ಐದನೇ ತರಗತಿ ಉತ್ತೀರ್ಣರಾಗಿರಬೇಕು.<br>2) ಲಘು ವಾಹನ ಚಾಲನೆಯ ಚಾಲ್ತಿಯಲ್ಲಿರುವ ಡ್ರೈವಿಂಗ್ ಲೈಸೆನ್ಸ್ ಹೊಂದಿರಬೇಕು.<br>3) ಸರ್ಕಾರದಿಂದ ಮಾನ್ಯತೆ ಪಡೆದ ಸಂಸ್ಥೆಯಿಂದ ಪ್ರಥಮ ಚಿಕಿತ್ಸೆ ಪ್ರಮಾಣ ಪತ್ರವನ್ನು ಹೊಂದಿರಬೇಕು. (ವಾಹನ ದಿನಚರಿ ಪುಸ್ತಕವನ್ನು ನಿರ್ವಹಿಸುವಂತಿರಬೇಕು)<br>4) ವಾಹನ ಚಾಲಕರಾಗಿ 3 ವರ್ಷಗಳ ಅನುಭವ ಹೊಂದಿರಬೇಕು. |

ಅಭ್ಯರ್ಥಿಗಳ ವಯೋಮಿತಿ ಕನಿಷ್ಟ 18 ವರ್ಷ ತುಂಬಿರಬೇಕು ಮತ್ತು ಗರಿಷ್ಟ 40 ವರ್ಷ ಮೀರಿರಬಾರದು. ಇತ್ತೀಚಿನ ಪಾಸ್ ಪೋರ್ಟ್ ಸೈಜಿನ ಒಂದು ಭಾವ ಚಿತ್ರ : ಅಂಕಪಟ್ಟಿ : ಜಾತಿ ಪ್ರಮಾಣಪತ್ರ : ಅನುಭವ ದೃಢೀಕರಣ ಪತ್ರ ಇತರ ಪಠ್ಯೇತರ ಚಟುವಟಿಕೆಗಳು ಸೇರಿದಂತೆ ಇತ್ಯಾದಿ ದೃಢೀಕೃತ ದಾಖಲೆಗಳ ಪ್ರತಿಗಳೊಂದಿಗೆ ಅರ್ಜಿಗಳನ್ನು ಈ ಪ್ರಕಟಣೆ ಪ್ರಕಟಗೊಂಡ 60 ದಿವಸಗಳೊಳಗಾಗಿ ಮೇಲ್ಕಂಡ ವಿಳಾಸಕ್ಕೆ ನೋಂದಾಯಿತ ಅಂಚೆ ಮೂಲಕ ಸಲ್ಲಿಸತಕ್ಕದ್ದು. ಅರ್ಜಿಯೊಂದಿಗೆ ಮೂಲ ದಾಖಲೆಗಳನ್ನು ಸಲ್ಲಿಸಬಾರದು.

**ಸೂಚನೆಗಳು:**

1. ಆಯ್ಕೆಯಾಗುವ ಅಭ್ಯರ್ಥಿಗಳಿಗೆ ವರ್ಷಕ್ಕೊಮ್ಮೆ ಸ್ವ-ಗ್ರಾಮ ಪ್ರಯಾಣ ಭತ್ಯೆ ರಿಯಾಯಿತಿ ಸೌಲಭ್ಯ ನೀಡಲಾಗುವುದು.
2. ಹುದ್ದೆಯ ಮೂಲ ವೇತನದ ಶೇಕಡಾ 25 ರಷ್ಟು ದೆಹಲಿ ಭತ್ಯೆಯನ್ನು ಹೆಚ್ಚುವರಿಯಾಗಿ ನೀಡಲಾಗುವುದು.
3. ಪ್ರತಿ 3 ವರ್ಷಕ್ಕೊಮ್ಮೆ ಚಳಿಗಾಲದ ಭತ್ಯೆಯಾಗಿ ರೂ.2,000/- ಗಳನ್ನು ನೀಡಲಾಗುವುದು.
4. ಮನೆ ಬಾಡಿಗೆ ಭತ್ಯೆಯಾಗಿ ಮಾಸಿಕ ರೂ.1000/- ಗಳನ್ನು ನೀಡಲಾಗುವುದು.
5. ಈ ನೇಮಕಾತಿಯು ಕರ್ನಾಟಕ ಭವನಕ್ಕೆ ಸೀಮಿತವಾಗಿದ್ದು, ಯಾವುದೇ ಕಾರಣಕ್ಕೂ ದೆಹಲಿಯಿಂದ ವರ್ಗಾವಣೆ/ಪ್ರತಿ ನಿಯೋಜನೆಗೆ ಅವಕಾಶವಿರುವುದಿಲ್ಲ.

ನಿವಾಸಿ ಆಯುಕ್ತರು,
ಕರ್ನಾಟಕ ಭವನ, ನವದೆಹಲಿ.

ಪಿ.ಆರ್. 710

**ಪೊಲೀಸ್ ಅಡಿಷನಲ್ ಡೈರೆಕ್ಟರ್ ಜನರಲ್‌ರವರ ಕಛೇರಿ, ರಾಜ್ಯ ಗುಪ್ತವಾರ್ತೆ, ನಂ.2, ನೃಪತುಂಗ ರಸ್ತೆ, ಬೆಂಗಳೂರು-1**

**ಅಧಿಸೂಚನೆ**

**ಟೆಂಡರ್ ಮತ್ತು ಬಹಿರಂಗ ಹರಾಜು**

**ಸಂಖ್ಯೆ: ಎಸ್‌ಬಿಎ/ಎಂ.ಟಿ1/194/2003-04, ದಿನಾಂಕ: 23ನೇ ಅಕ್ಟೋಬರ್ 2003**

**ವಿಷಯ:** ರಾಜ್ಯ ಗುಪ್ತವಾರ್ತೆ ಘಟಕದಲ್ಲಿನ ನಿರುಪಯುಕ್ತ ಮೋಟಾರು ವಾಹನಗಳನ್ನು ಟೆಂಡರ್ ಮತ್ತು ಬಹಿರಂಗ ಹರಾಜು ಮೂಲಕ ಮಾರಾಟ ಮಾಡುವ ಬಗ್ಗೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ರಾಜ್ಯ ಗುಪ್ತವಾರ್ತೆ ಘಟಕ ಬೆಂಗಳೂರು ಕೇಂದ್ರಸ್ಥಾನದಲ್ಲಿರುವ 04 ವಾಹನಗಳನ್ನು ನಿರುಪಯುಕ್ತಗೊಳಿಸಿದೆ. ಅವುಗಳನ್ನು ಟೆಂಡರ್ ಮತ್ತು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುತ್ತದೆ. ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ರಾಜ್ಯ ಗುಪ್ತವಾರ್ತೆ, ನೃಪತುಂಗ ರಸ್ತೆ, ಬೆಂಗಳೂರು ರವರ ಕಛೇರಿ ಆವರಣದಲ್ಲಿ ದಿನಾಂಕ: 10.12.2003 ರಂದು ಬೆಳಿಗ್ಗೆ 11.00 ಘಂಟೆಗೆ ಹರಾಜು ಮಾಡುವ ಬಗ್ಗೆ ಸಾರ್ವಜನಿಕರಿಗೆ ತಿಳಿಯಪಡಿಸಲು ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ.

| ಕ್ರ.ಸಂ. | ವಾಹನ ನೋಂದಣಿ ಸಂಖ್ಯೆ | ಮಾಡಲ್ | ಖರೀದಿಸಿದ ವರ್ಷ |
|---|---|---|---|
| 01. | ಸಿಎಇ 9785 | ಅಂಬಾಸಿಡರ್ ಪೆಟ್ರೋಲ್ ಕಾರು | 1981 |
| 02. | ಸಿಎಇ 9786 | ಅಂಬಾಸಿಡರ್ ಪೆಟ್ರೋಲ್ ಕಾರು | 1981 |
| 03. | ಸಿಎಇ 9790 | ಅಂಬಾಸಿಡರ್ ಪೆಟ್ರೋಲ್ ಕಾರು | 1981 |
| 04. | ಸಿಕೆಜಿ 275 | ಯಜ್ಡಿ ಮೋಟಾರ್ ಸೈಕಲ್ | 1986 |

ಮೇಲ್ಕಂಡ ನಿರುಪಯುಕ್ತ ಮೋಟಾರು ವಾಹನಗಳನ್ನು ಸಾರ್ವಜನಿಕರ ವೀಕ್ಷಣೆ / ಪರಿಶೀಲನೆಗಾಗಿ ಪೊಲೀಸ್ ಅಡಿಷನಲ್ ಡೈರೆಕ್ಟರ್ ಜನರಲ್, ರಾಜ್ಯ ಗುಪ್ತವಾರ್ತೆ, ನೃಪತುಂಗ ರಸ್ತೆ, ಬೆಂಗಳೂರು ರವರ ಕಛೇರಿಯ ಆವರಣದಲ್ಲಿ ನಿಲ್ಲಿಸಿದ್ದು ಸಾರ್ವಜನಿಕರು ಎಲ್ಲಾ ಕೆಲಸದ ದಿನಗಳಲ್ಲಿ ಕಛೇರಿ ವೇಳೆಯಲ್ಲಿ ಪರೀಕ್ಷಿಸಬಹುದು. ಟೆಂಡರ್ ಫಾರಂಗಳನ್ನು, ನಿಬಂಧನೆ ಮತ್ತು ಷರತ್ತುಗಳ ವಿವರಗಳನ್ನು ಈ ಕಛೇರಿಯ (ಎಂ.ಟಿ.ಓ.) ರವರಿಂದ / ವಾಹನ ಶಾಖೆ ಅಧಿಕಾರಿ ಪಡೆಯಬಹುದು.

ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 8.12.2003 ರಂದು ಸಂಜೆ 5.00 ಗಂಟೆ ಒಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಲು ಸೂಚಿಸಲಾಗಿದೆ.

**ನಿಬಂಧನೆ ಮತ್ತು ಷರತ್ತುಗಳು**

1. ಮೋಟಾರು ವಾಹನಗಳ ಬಹಿರಂಗ ಹರಾಜನ್ನು ದಿನಾಂಕ: 10.12.2003 ರಂದು ಬೆಳಿಗ್ಗೆ 11.00 ಗಂಟೆಗೆ ಎ.ಡಿ.ಜಿ.ಪಿ., ಗುಪ್ತವಾರ್ತೆ, ನೃಪತುಂಗ ರಸ್ತೆ, ಬೆಂಗಳೂರುರವರ ಕಛೇರಿಯ ಆವರಣದಲ್ಲಿ ನಡೆಸಲಾಗುವುದು.
2. ಮೋಟಾರು ವಾಹನಗಳನ್ನು ಎಲ್ಲಿ ಹೇಗಿದೆಯೋ (As is and where is basis) ಅದೇ ಪರಿಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
3. ಟೆಂಡರ್ ಫಾರಂಗಳನ್ನು ಎ.ಡಿ.ಜಿ.ಪಿ. ಗುಪ್ತವಾರ್ತೆ, ಬೆಂಗಳೂರುರವರ ಕಛೇರಿಯ ವಾಹನ ಶಾಖೆ (ಎಂ.ಟಿ.ಓ.) ಯಿಂದ ಪಡೆಯಬಹುದಾಗಿದೆ. ಫಾರಂಗಳಿಗಾಗಿ ಹಣವನ್ನು ಸಂದಾಯ ಮಾಡುವ ಅಗತ್ಯವಿಲ್ಲ.
4. ಟೆಂಡರ್ ಫಾರಂಗಳನ್ನು ದ್ವಿಪ್ರತಿಯಲ್ಲಿ ಸಲ್ಲಿಸಬೇಕು ಹಾಗೂ ಭರ್ತಿ ಮಾಡಿದ ಫಾರಂಗಳನ್ನು ಒಂದು ಲಕೋಟೆಯಲ್ಲಿಟ್ಟು ಮೊಹರು ಮಾಡಿರಬೇಕು. ಮೊಹರು ಮಾಡಿದ ಲಕೋಟೆಗಳನ್ನು ಎ.ಡಿ.ಜಿ.ಪಿ. ಗುಪ್ತವಾರ್ತೆ, ಬೆಂಗಳೂರುರವರ ಹೆಸರಿನಲ್ಲಿ ಸಲ್ಲಿಸಬೇಕು ಮತ್ತು ಲಕೋಟೆಗಳ ಮೇಲೆ ಮೋಟಾರು ವಾಹನಗಳು ಖರೀದಿಸುವುದಕ್ಕಾಗಿ ಟೆಂಡರ್ ಫಾರಂ ಎಂದು ನಮೂದಿಸಿರಬೇಕು.
5. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಅರ್ನೆಸ್ಟ್‌ಮನಿ (ಇಎಂಡಿ) ಠೇವಣಿಯೊಂದಿಗೆ (ಡಿಮ್ಯಾಂಡ್ ಡ್ರಾಫ್ಟ್‌ನ್ನು ಮಾತ್ರ ಸಲ್ಲಿಸಬೇಕು). ಲಕೋಟೆಯಲ್ಲಿಟ್ಟು ಮೊಹರು ಮಾಡಿರಬೇಕು ಮತ್ತು ಲಕೋಟೆಯನ್ನು ಎಂ.ಟಿ.ಓ. ಗುಪ್ತವಾರ್ತೆ, ಬೆಂಗಳೂರು ರವರಿಗೆ ಸಲ್ಲಿಸಿ ಸ್ವೀಕೃತಿಯನ್ನು ಪಡೆಯಬಹುದು.
6. ಟೆಂಡರ್ ಫಾರಂಗಳಲ್ಲಿ ಮೋಟಾರು ವಾಹನಗಳಿಗೆ ನಮೂದಿಸಲಾಗುವ ಮೊತ್ತವನ್ನು ಸಂಖ್ಯೆ ಮತ್ತು ಪದಗಳೆರಡಲ್ಲಿಯೂ ಸ್ಪಷ್ಟವಾಗಿ ಬರೆಯಬೇಕು.

7. ಟೆಂಡರ್ ಫಾರಂಗಳನ್ನು ವರ್ಗಾಯಿಸಬಾರದು ಹಾಗೂ ಎಲ್ಲಾ ವಾಹನಗಳಿಗೆ ಒಂದೇ ಟೆಂಡರ್ ಫಾರಂನ್ನು ಉಪಯೋಗಿಸಬಹುದು. (ಒಂದು ವಾಹನಕ್ಕೆ ರೂ.500.00 ರಂತೆ ಇ.ಎಂ.ಡಿ. ಸಲ್ಲಿಸಬೇಕು).
8. ಪ್ರತಿ ಟೆಂಡರ್ ಫಾರಂನೊಂದಿಗೆ 500 ರೂ.ಗಳ (ರೂ. ಐದು ನೂರು ಮಾತ್ರ) ಅರ್ನೆಸ್ಟ್‌ಮನಿ ಡಿಪಾಸಿಟನ್ನು ಸಲ್ಲಿಸಿರಬೇಕು. ಅರ್ನೆಸ್ಟ್‌ಮನಿ ಡಿಪಾಸಿಟ್‌ನ (ಇಎಂಡಿ) ಮೊತ್ತ ರೂ.500.00 ಗಳನ್ನು ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್, ಗುಪ್ತವಾರ್ತೆ, ಬೆಂಗಳೂರುರವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳಿಂದ ಪಡೆಯಲಾದ ಡಿಮ್ಯಾಂಡ್ ಡ್ರಾಫ್ಟ್‌ನ (ಡಿ.ಡಿ.) ಮೂಲಕ ಮಾತ್ರ ಸಲ್ಲಿಸಬೇಕು. ಅರ್ನೆಸ್ಟ್ ಡಿಪಾಸಿಟ್ ಮೊತ್ತವನ್ನು ನಗದು ರೂಪದಲ್ಲಿ ಸ್ವೀಕರಿಸಲಾಗುವುದಿಲ್ಲ ಮತ್ತು ಡಿಪಾಸಿಟ್ ಇಲ್ಲದೆ ಸಲ್ಲಿಸಲಾದ ಟೆಂಡರ್ ಫಾರಂನ್ನು ತಿರಸ್ಕರಿಸಲಾಗುವುದು. ಅರ್ನೆಸ್ಟ್‌ಮನಿ ಡಿಪಾಸಿಟ್ ಮೊತ್ತಕ್ಕೆ ಬಡ್ಡಿಯನ್ನು ಕೊಡಲಾಗುವುದಿಲ್ಲ.
9. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 8.12.2003 ರಂದು ಸಂಜೆ 5.00 ಗಂಟೆಯೊಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಬೇಕು. ದಿನಾಂಕ: 8.12.2003ರ ನಂತರ ಸ್ವೀಕರಿಸಲಾದ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.
10. 500.00 ರೂ.ಗಳ ಅರ್ನೆಸ್ಟ್ ಡಿಪಾಸಿಟ್‌ನೊಂದಿಗೆ ಟೆಂಡರ್ ಫಾರಂಗಳನ್ನು ಸಲ್ಲಿಸಿರುವವರಿಗೂ ಸಹ ದಿನಾಂಕ: 10.12.2003 ರಂದು ಬೆಳಿಗ್ಗೆ 11.00 ಗಂಟೆಗೆ ನಡೆಸಲಾಗುವ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದಾಗಿದೆ. ಹೀಗೆ ಹರಾಜಿನಲ್ಲಿ ಭಾಗವಹಿಸುವುದಕ್ಕಾಗಿ ಇವರು ಪುನಃ ಅರ್ನೆಸ್ಟ್ ಡಿಪಾಸಿಟನ್ನು (ಇಎಂಡಿ) ಕೊಡಬೇಕಿಲ್ಲ.
11. ಮೋಟಾರು ವಾಹನಗಳ ಸಂಖ್ಯೆ ಮತ್ತು ಬೆಲೆಯನ್ನು ಪದಗಳಲ್ಲಿ ಸ್ಪಷ್ಟವಾಗಿ ನಮೂದಿಸದ ಟೆಂಡರ್ ಫಾರಂಗಳನ್ನು ತಿರಸ್ಕರಿಸಲಾಗುವುದು. ಟೆಂಡರ್‌ನಲ್ಲಿ ನಮೂದಿಸಲಾಗುವ ಮೊತ್ತದಲ್ಲಿ ಯಾವುದೇ ತಿದ್ದುಪಡಿ ಇದ್ದಲ್ಲಿ ಅದನ್ನು ಟೆಂಡರ್ ಫಾರಂನ್ನು ಸಲ್ಲಿಸುವವರು ಪೂರ್ಣ ಸಹಿ ಮಾಡಿ ದೃಢೀಕರಿಸಿರಬೇಕು.
12. ಸಾರ್ವಜನಿಕ ಹರಾಜಿನಲ್ಲಿ ಭಾಗವಹಿಸಲಿಚ್ಛಿಸುವವರು ದಿನಾಂಕ: 10.12.2003ರ ಬೆಳಿಗ್ಗೆ 10.30 ಗಂಟೆಯೊಳಗಾಗಿ 500 ರೂ.ಗಳ ನಗದು ಠೇವಣಿಯನ್ನು ಕಛೇರಿಯ ನಗದು ಶಾಖೆಯಲ್ಲಿ ಪಾವತಿ ಮಾಡಿ ಹರಾಜಿನಲ್ಲಿ ಭಾಗವಹಿಸಬಹುದು. 500.00 ರೂ.ಗಳ ಠೇವಣಿಯನ್ನು ಪಾವತಿ ಮಾಡದೇ ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಹರಾಜಿನಲ್ಲಿ ಯಶಸ್ವಿಯಾಗದವರಿಗೆ ಠೇವಣಿ ಹಣ 500.00 ರೂ.ಗಳನ್ನು ಕೂಡಲೇ ವಾಪಸ್ ಕೊಡಲಾಗುವುದು. ಹರಾಜಿನಲ್ಲಿ ಯಶಸ್ವಿಯಾದವರಿಗೆ ಠೇವಣಿ ಹಣವನ್ನು ಕೂಡಲೇ ವಾಪಸ್ ಕೊಡಲಾಗುವುದಿಲ್ಲ.
13. ಎ.ಡಿ.ಜಿ.ಪಿ. ಗುಪ್ತವಾರ್ತೆ, ಬೆಂಗಳೂರುರವರ ಮೇಲು ಉಸ್ತುವಾರಿಯಲ್ಲಿ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ದಿನಾಂಕ: 10.12.2003 ರಂದು ಹರಾಜನ್ನು ನಡೆಸುವರು. ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಮೋಟಾರು ವಾಹನಗಳಿಗೆ ತಮ್ಮ ಬೆಲೆಯನ್ನು ಕೂಗಬಹುದಾಗಿದೆ.
14. ಎ.ಡಿ.ಜಿ.ಪಿ. ಗುಪ್ತವಾರ್ತೆ, ಬೆಂಗಳೂರು ರವರ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು, ಹರಾಜಿನ ನಂತರ ಮೊಹರಾದ ಟೆಂಡರ್‌ಗಳನ್ನು ಬಿಡ್‌ದಾರರ ಅಥವಾ ಅವರ ಏಜೆಂಟರ್‌ರವರು ಯಾರು ಹಾಜರಿರುತ್ತಾರೋ ಅವರ ಸಮ್ಮುಖದಲ್ಲಿ ಅದೇ ದಿನದಂದು ಒಡೆಯುವರು. ಹರಾಜಿನಲ್ಲಿ ಅಥವಾ ಟೆಂಡರ್‌ನಲ್ಲಿ ಯಾವುದರಲ್ಲಿ ಹೆಚ್ಚಿನ ಮೊತ್ತ ದೊರಕುವುದೋ ಅಂತಹ ಟೆಂಡರ್ / ಹರಾಜನ್ನು ಪರಿಗಣಿಸಲಾಗುವುದು ಮತ್ತು ಸ್ವೀಕರಿಸಲಾಗುವುದು.
15. ಯಶಸ್ವಿಯಾದ ಬಿಡ್ಡುದಾರರು ಅಥವಾ ಟೆಂಡರ್‌ದಾರರು ಒಟ್ಟು ಮೊತ್ತದಲ್ಲಿ ಶೇಕಡಾ 25 ರಷ್ಟು ಮೊತ್ತವನ್ನು ಕೂಡಲೇ ಎ.ಡಿ.ಜಿ.ಪಿ. ಗುಪ್ತವಾರ್ತೆ, ಬೆಂಗಳೂರು ರವರ ಕಛೇರಿಯ ಲೆಕ್ಕ ಶಾಖೆಯಲ್ಲಿ ನಗದು ಹಣವನ್ನು ಪಾವತಿ ಮಾಡತಕ್ಕದ್ದು. ದೃಢೀಕರಣ ಪತ್ರ ಬಿಡ್ಡುದಾರರಿಗೆ : ಟೆಂಡರ್‌ದಾರರಿಗೆ ತಲುಪಿದ 8 ದಿನಗಳೊಳಗಾಗಿ ಬಾಕಿ ಶೇಕಡ 75 ರಷ್ಟು ಮೊತ್ತ ಮತ್ತು ತೆರಿಗೆ ಹಣವನ್ನು ಪಾವತಿ ಮಾಡತಕ್ಕದ್ದು ಹಾಗೂ ಮೋಟಾರು ವಾಹನಗಳನ್ನು ವಶಕ್ಕೆ ತೆಗೆದುಕೊಳ್ಳತಕ್ಕದ್ದು. ಬಿಡ್ಡಿನ / ಟೆಂಡರಿನ ಪೂರ್ತಿ ಮೊತ್ತವನ್ನು ಪಾವತಿ ಮಾಡಿ ಹಣವನ್ನು ತೆಗೆದುಕೊಳ್ಳದಿದ್ದಲ್ಲಿ ಬಿಡ್ಡುದಾರರ / ಟೆಂಡರುದಾರರ ಬಿಡ್ಡನ್ನು ರದ್ದುಗೊಳಿಸ ಲಾಗುವುದು ಹಾಗೂ ಮೋಟಾರು ವಾಹನಗಳನ್ನು ಮಾರಾಟ ಮಾಡುವುದಕ್ಕೆ ಪ್ರತ್ಯೇಕವಾಗಿ ಕ್ರಮವನ್ನು ತೆಗೆದುಕೊಳ್ಳಲಾಗುವುದು. ಹಣವನ್ನು ಪಾವತಿ ಮಾಡುವುದಕ್ಕೆ ಸಂಬಂಧಿಸಿದಂತೆ ಹುಂಡಿಗಳನ್ನು ಅಥವಾ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸ್ವೀಕರಿಸಲಾಗುವುದಿಲ್ಲ. ಎಲ್ಲಾ ನಗದು ಪಾವತಿಗಳನ್ನು ಎ.ಡಿ.ಜಿ.ಪಿ. ಗುಪ್ತವಾರ್ತೆ ಬೆಂಗಳೂರುರವರ ಕಛೇರಿಯ ಲೆಕ್ಕ ಶಾಖೆಯಲ್ಲಿ ಮಾತ್ರ ಮಾಡತಕ್ಕದ್ದು.
16. ಟೆಂಡರ್‌ದಾರರು : ಬಿಡ್ಡುದಾರರು ಪಾವತಿ ಮಾಡಿರುವ ಅರ್ನೆಸ್ಟ್‌ಮನಿ ಠೇವಣಿ ಹಣವನ್ನು ಮೋಟಾರು ವಾಹನದ ಬಾಕಿ ಇರುವ ಶೇಕಡ 75 ರಷ್ಟು ಮೊತ್ತಕ್ಕೆ ಹೊಂದಾಣಿಕೆ ಮಾಡಲಾಗುವುದಿಲ್ಲ. ಬಿಡ್ಡುದಾರರು ಎಲ್ಲಾ ನಿಬಂಧನೆ ಮತ್ತು ಷರತ್ತುಗಳನ್ನು ಪೂರೈಸಿ ಮೋಟಾರು ವಾಹನವನ್ನು ತಮ್ಮ ವಶಕ್ಕೆ ಪಡೆದ ನಂತರ ಈ ಅರ್ನೆಸ್ಟ್ ಠೇವಣಿ ಮೊತ್ತ 500 ರೂ.ಗಳನ್ನು ಲೆಕ್ಕ ಶಾಖೆಯಿಂದ ವಾಪಸ್ ಪಡೆಯಬಹುದಾಗಿದೆ.
17. ಯಶಸ್ವಿ ಬಿಡ್ಡುದಾರರು ನಿಗದಿತ ಅವಧಿಯಲ್ಲಿ ಹಣವನ್ನು ಪಾವತಿ ಮಾಡದಿದ್ದಲ್ಲಿ ಅಥವಾ ಈ ಇಲಾಖೆಗೆ ಯಾವುದೇ ರೀತಿಯ ನಷ್ಟ ಉಂಟುಮಾಡಿದ್ದಲ್ಲಿ ನಷ್ಟದ ಮೊತ್ತವನ್ನು ಅರ್ನೆಸ್ಟ್ ಮನಿ ಡಿಪಾಸಿಟ್ ಹಾಗೂ ಪಾವತಿ ಮಾಡಲಾದ ಬಿಡ್ಡಿನ ಶೇಕಡ 25 ರಷ್ಟು ಮೊತ್ತದಿಂದ ವಸೂಲಿ ಮಾಡಲಾಗುವುದು. ಅಥವಾ ಡಿಪಾಸಿಟ್ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಕಾನೂನಿನ ಕ್ರಮವನ್ನು ಸಹ ಜರುಗಿಸಲಾಗುವುದು.
18. ಮಾರಾಟ ತೆರಿಗೆ ಮತ್ತು ಇತರೆ ಛಾರ್ಜ್‌ಗಳನ್ನು ಮಾರಾಟದ ದಿನದಂದು ಅನ್ವಯಿಸುವಂತೆ ಪ್ರತ್ಯೇಕವಾಗಿ (ಬಿಡ್ಡಿನ ಅಥವಾ ಹರಾಜಿನ ಮೊತ್ತಕ್ಕೆ) ವಿಧಿಸಲಾಗುವುದು.
19. ಯಶಸ್ವಿ ಬಿಡ್ಡುದಾರರು / ಟೆಂಡರ್‌ದಾರರು ತಮ್ಮ ಸ್ವಂತ ವೆಚ್ಚದಿಂದ ಮೋಟಾರು ವಾಹನಗಳ ಸಾಗಣೆಕೆಗಾಗಿ ವ್ಯವಸ್ಥೆ ಮಾಡಿಕೊಳ್ಳಬೇಕು.

20. ಎ.ಡಿ.ಜಿ.ಪಿ. ಗುಪ್ತವಾರ್ತೆ ಬೆಂಗಳೂರುರವರ ಯಾವುದೇ ಕಾರಣವನ್ನು ನೀಡದೇ ಟೆಂಡರ್ : ಹರಾಜನ್ನು ಸ್ವೀಕರಿಸುವ, ತಿರಸ್ಕರಿಸುವ ಮುಂದೂಡುವ ಅಥವಾ ರದ್ದುಪಡಿಸುವ ಹಕ್ಕನ್ನು ಹೊಂದಿರುತ್ತಾರೆ. ಎ.ಡಿ.ಜಿ.ಪಿ. ಗುಪ್ತವಾರ್ತೆ, ಬೆಂಗಳೂರು ರವರ ತೀರ್ಮಾನವೇ ಅಂತಿಮವಾಗಿರುತ್ತದೆ. ಮತ್ತು ಅವರ ತೀರ್ಮಾನಕ್ಕೆ ಎಲ್ಲರೂ ಬದ್ದರಾಗಬೇಕಾಗುತ್ತದೆ.

21. ಈ ಮೋಟಾರು ವಾಹನಗಳ ಮಾರಾಟದ ಒಪ್ಪಂದದಲ್ಲಿ ಯಾವುದೇ ವಿವಾದ ಉಂಟಾದಲ್ಲಿ ಡೈರೆಕ್ಟರ್ ಜನರಲ್ ಮತ್ತು ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್, ಕರ್ನಾಟಕ ರಾಜ್ಯ, ಬೆಂಗಳೂರುರವರ ನಿರ್ಣಯ ಅಂತಿಮವಾಗಿದೆ.

22. ಮಾರಾಟ ಮಾಡಲಾಗುವ ಮೋಟಾರು ವಾಹನಗಳನ್ನು ಎ.ಡಿ.ಜಿ.ಪಿ. ಗುಪ್ತವಾರ್ತೆ, ಬೆಂಗಳೂರುರವರ ಕಛೇರಿಯ ಆವರಣದಲ್ಲಿ ನಿಲ್ಲಿಸಲಾಗಿದ್ದು, ಎಲ್ಲಾ ಕೆಲಸದ ದಿನಗಳಂದು ಕಛೇರಿಯ ವೇಳೆಯಲ್ಲಿ ವಾಹನಗಳನ್ನು ಸಾರ್ವಜನಿಕರು ಪರೀಕ್ಷಿಸಬಹುದಾಗಿದೆ.

23. ಈ ಸಂಬಂಧದಲ್ಲಿ ಹೆಚ್ಚಿನ ಮಾಹಿತಿಯನ್ನು ಎಂಟಿಒ ಗುಪ್ತವಾರ್ತೆ, ಬೆಂಗಳೂರುರವರಿಂದ ಪಡೆಯಬಹುದಾಗಿದೆ.

ಪೊಲೀಸ್ ಅಡಿಷನಲ್ ಡೈರೆಕ್ಟರ್ ಜನರಲ್‌ರವರ ಪರವಾಗಿ,

ಪಿ.ಆರ್. 700 ರಾಜ್ಯ ಗುಪ್ತವಾರ್ತೆ.

## ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ ವಿಭಾಗ, ಬಾಗಲಕೋಟೆ ಇವರ ಕಛೇರಿ

## ಅಲ್ಪಾವಧಿ ಗುತ್ತಿಗೆ ಆಹ್ವಾನ ಪತ್ರಿಕೆ

**ಸಂಖ್ಯೆ: ಲೋಇ:ಬಾವಿ:ಕಟ್ಟಡ:ಕಿಂ:2003-04/2073, ದಿನಾಂಕ: 27ನೇ ಅಕ್ಟೋಬರ್ 2003**

ಕರ್ನಾಟಕ ರಾಜ್ಯಪಾಲರ ಪರವಾಗಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಯವರಿಂದ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಣೆ ಮಾಡಿಸಿದ ಅರ್ಹ ಗುತ್ತಿಗೆದಾರರಿಂದ ಕೆಳಗೆ ನಮೂದಿಸಿದ ಕಾಮಗಾರಿಗಳಿಗೆ ಐಟಂವಾರು ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಕೆಲಸದ ಹೆಸರನ್ನು ನಮೂದಿಸಿ ಮೊಹರು ಬಂದ್ ಮಾಡಿದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ಅನುಸೂಚಿತ ಅವಧಿ ಮತ್ತು ವೇಳೆಯಲ್ಲಿ ಸ್ವೀಕರಿಸಲಾಗುವುದು. ಅವುಗಳನ್ನು ಗುತ್ತಿಗೆದಾರರ ಅಥವಾ ಅವರ ಪ್ರತಿನಿಧಿಗಳ ಹಾಜರಾತಿಯಲ್ಲಿ ಅಂದೇ ಅಥವಾ ಮುಂದಿನ ಯಾವುದಾದರೂ ಕೆಲಸದ ಅವಧಿಯಲ್ಲಿ ತೆರೆಯಲಾಗುವುದು.

ಗುತ್ತಿಗೆದಾರರು ಟೆಂಡರುಗಳನ್ನು ಸಾಮಾನ್ಯ ನಿಯಮಗಳಲ್ಲಿ ಸೂಚಿಸಿದ ವಿವರಗಳನ್ನೊಳಗೊಂಡಿರುವಂತೆ, ಎಲ್ಲ ದಾಖಲೆಗಳನ್ನು ಅರ್ಜಿಯೊಂದಿಗೆ ನಿಗದಿತ ಅವಧಿಯಲ್ಲಿ ಸಲ್ಲಿಸಬೇಕು.

| ಅ. ನಂ | ಕೆಲಸದ ಹೆಸರು | ಟೆಂಡರಿಗಿಟ್ಟಿರುವ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಮುಂಗಡ ಠೇವಣಿ ಹಣ ಟೆಂಡರ್ ನಿಯಮಾವಳಿ ಯಂತೆ ರೂಪಾಯಿ | ಟೆಂಡರ್ ಫಾರಂ ಬೆಲೆ ರೂ. (ಹಿಂದಿರುಗಿಸ ಲಾಗುವುದಿಲ್ಲ) | ಕೆಲಸವನ್ನು ಮುಗಿಸಲು ಕಾಲಮಿತಿ | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | ಬಾಗಲಕೋಟೆ ಜಿಲ್ಲೆಯ ಬಾಗಲಕೋಟೆ ನವನಗರದಲ್ಲಿ ಲೋಕೋಪಯೋಗಿ ಇಲಾಖೆಯ ವಿಭಾಗ ಕಛೇರಿ ಕಟ್ಟಡ ನಿರ್ಮಾಣ ಮಾಡುವುದು. | 30.00 | 30000.00 | 3480.00 ಟ್ಯಾಕ್ಸ್ ಸಹಿತ | 12 ತಿಂಗಳು ಮಳೆಗಾಲ ಹೊರತು ಪಡಿಸಿ | ಒಂದನೇ ದರ್ಜೆ |

**ಸಾಮಾನ್ಯ ವಿವರಣೆಗಳು:**

1. ಗುತ್ತಿಗೆದಾರರು ಇಂಥದೆ ಆದ ಕಾಮಗಾರಿಗಳನ್ನು ಪ್ರತಿ ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಮೊತ್ತದ ಕಾಮಗಾರಿಗಳನ್ನು ಹಿಂದಿನ 5 ಆರ್ಥಿಕ ವರ್ಷಗಳಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರ್ತಿಗೊಳಿಸಿರಬೇಕು. (ಕಾಮಗಾರಿ ಮೊತ್ತವನ್ನು ಕಾಮಗಾರಿ ಪೂರ್ತಿಗೊಂಡ ಆರ್ಥಿಕ ವರ್ಷದಿಂದ ಈ ವರ್ಷದವರೆಗೆ ಶೇಕಡಾ 10 ರಂತೆ ಪ್ರತಿ ವರ್ಷಕ್ಕೆ ಲೆಕ್ಕ ಹಾಕುವುದು) ಅಲ್ಲದೆ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಕಾಮಗಾರಿಯನ್ನು ಕೈಗೊಂಡಿದ್ದರೆ ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಹಣ ಪಾವತಿ ಆಗಿರಬೇಕು.

2. ಕೆಲಸಕ್ಕೆ ಬೇಕಾದ ಎಲ್ಲ ಸಾಮಗ್ರಿಗಳನ್ನು ಗುತ್ತಿಗೆದಾರರೇ ತಂದು ನಿರ್ವಹಿಸಬೇಕು. ಸೆಂಟ್ರಿಂಗ್ ಪ್ಲೇಟ್‌ಗಳು, ಹಾಪರ ಇರುವ ಕಾಂಕ್ರೀಟ್ ಮಿಕ್ಸರ್, ವೈಬ್ರೇಟರ್ ಮುಂತಾದ ಕಟ್ಟಡ ಸಲಕರಣೆಗಳನ್ನು ಹೊಂದಿರಬೇಕು. ಇಲಾಖೆ ವತಿಯಿಂದ ಯಾವುದೇ ರೀತಿ ಸಲಕರಣೆ ಹಾಗೂ ಸಾಮಗ್ರಿಗಳನ್ನು ಪೂರೈಸಲಾಗುವುದಿಲ್ಲ. ಗುತ್ತಿಗೆದಾರರು ಪೂರೈಸುವ ಸಾಮಗ್ರಿಗಳನ್ನು ಸೂಚಿಸಿದ ಪರೀಕ್ಷಣಾ ಕೇಂದ್ರದಲ್ಲಿ ತಮ್ಮ ಸ್ವಂತ ಖರ್ಚಿನಲ್ಲಿ ಪರೀಕ್ಷಿಸಿಕೊಂಡು ಸಂಬಂಧಪಟ್ಟ ಅಧಿಕಾರಿಗಳಿಗೆ ಪ್ರಮಾಣ ಪತ್ರವನ್ನು ಸಲ್ಲಿಸಿ ಅನುಮತಿ ಪಡೆದುಕೊಂಡು ಸಾಮಗ್ರಿಗಳನ್ನು ಕೆಲಸಕ್ಕೆ ಉಪಯೋಗಿಸಬೇಕಾಗುತ್ತದೆ.

3. ಮೇಲೆ ನಮೂದಿಸಿದ ಕೆಲಸದ ಟೆಂಡರ್‌ಗಳಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು ನಿಗದಿತ ಟೆಂಡರ್ ಫಾರ್ಮ್ ಬೆಲೆಯನ್ನು ನಗದು ರೂಪದಲ್ಲಿ ಅಥವಾ ಡಿಮ್ಯಾಂಡ್ ಡ್ರಾಫ್ಟ್‌ನ್ನು ಕಾರ್ಯನಿರ್ವಾಹಕ ಇಂಜೀನಿಯರರು ಲೋಕೋಪಯೋಗಿ ಇಲಾಖೆ ವಿಭಾಗ ಬಾಗಲಕೋಟೆ ಇವರ ಹೆಸರಿನಲ್ಲಿ ಬಾಗಲಕೋಟದಲ್ಲಿ ಹಣ ಪಾವತಿಯಾಗುವಂತೆ ಡಿ.ಡಿ. ಯನ್ನು ಈ ಕೆಳಗೆ ನಮೂದಿಸಿದ ದಿನಾಂಕದಂದು ಅರ್ಜಿಯೊಂದಿಗೆ ಸಲ್ಲಿಸಬೇಕು.

4. ಯಾವುದೇ ಅಥವಾ ಎಲ್ಲ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೆ ನಿರಾಕರಿಸುವ ಹಕ್ಕನ್ನು ಟೆಂಡರ್‌ಗಳನ್ನು ನಿರ್ಧರಿಸುವ ಅಧಿಕಾರಿಗಳು ಕಾಯ್ದಿರಿಸಿಕೊಂಡಿದ್ದಾರೆ.

5. ಗುತ್ತಿಗೆದಾರರು ಫೈನಾನ್ಸಿಯಲ್ ಬಿಡ್‌ನಲ್ಲಿ ಐಟಂವಾರು ದರಗಳನ್ನು ಅಂಕಿಯಲ್ಲಿ ಮತ್ತು ಅಕ್ಷರಗಳಲ್ಲಿ ತಪ್ಪದೇ ನಮೂದಿಸಬೇಕು ಮತ್ತು ಮೊಹರು ಮಾಡಿ ಸಲ್ಲಿಸಬೇಕು.

6. ಸದರಿ ಕೆಲಸದ ಟೆಂಡರಿಗೆ ನಮೂದಿಸಿದ ಮುಂಗಡ ಠೇವಣಿ ಹಣವನ್ನು ರಾಷ್ಟ್ರೀಕೃತ : ಶೆಡ್ಯೂಲ್ ಬ್ಯಾಂಕ್ ನಿಂದ ಡಿಮ್ಯಾಂಡ್ ಡ್ರಾಫ್ಟ್ : ಕಾಲ್ ಡಿಪಾಜಿಟ್ ನಗದು ರಶೀದಿಯನ್ನು ಕಾರ್ಯನಿರ್ವಾಹಕ ಇಂಜಿನೀಯರರು ಲೋ೩ ವಿಭಾಗ ಬಾಗಲಕೋಟೆ ಇವರ ಹೆಸರಿನಲ್ಲಿ ಪಡೆದು ಟೆಂಡರ್ ಜೊತೆಗೆ ಲಗತ್ತಿಸಿ ಸಲ್ಲಿಸಬೇಕು. ಬ್ಯಾಂಕ್ ಗ್ಯಾರಂಟಿಯನ್ನು ತೆಗೆದುಕೊಂಡಲ್ಲಿ ನಿಗದಿತ ನಮೂನೆಯಲ್ಲಿ ಕೆಲಸದ ಹೆಸರು ನಮೂದಿಸಿ ಸಲ್ಲಿಸಬೇಕು. ರಾಷ್ಟ್ರೀಯ ಉಳಿತಾಯ ಪತ್ರಗಳನ್ನು ಸಲ್ಲಿಸಬಯಸುವವರು ಈ ಕೆಳಗೆ ಸಹಿ ಮಾಡಿದ ಅಧಿಕಾರಿಯವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಿ ಲಗತ್ತಿಸಬೇಕು. ತಪ್ಪಿದಲ್ಲಿ ಅಂಥವರ ಗುತ್ತಿಗೆಯನ್ನು ತಿರಸ್ಕರಿಸಲಾಗುವುದು.

7. **ಟೆಂಡರ್ ಅವಧಿ ಈ ಕೆಳಗಿನಂತಿವೆ:**

| | | |
|---|---|---|
| ಅ) ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ | : | 17.11.2003ರ ವರೆಗೆ ಮತ್ತು ಅದಕ್ಕಿಂತ ಮೊದಲು ಕಛೇರಿ ವೇಳೆಯಲ್ಲಿ ಮಾತ್ರ. |
| ಬ) ಖುಲ್ಲಾ ಟೆಂಡರ್ ಫಾರಂಗಳನ್ನು ಪೂರೈಸುವ ದಿನಾಂಕ | : | 21.11.2003 ರಂದು ಕಛೇರಿ ವೇಳೆಯಲ್ಲಿ ಮಾತ್ರ. |
| ಕ) ಟೆಂಡರ್‌ಗಳನ್ನು ಸಲ್ಲಿಸುವ ದಿನಾಂಕ | : | 25.11.2003 ರಂದು ಸಾಯಂಕಾಲ 4.00 ಗಂಟೆ ವರೆಗೆ<br>1) ಅ.ಅ. ಲೋ೩ ವೃತ್ತ ಬೆಳಗಾಂವ ಕಛೇರಿಯಲ್ಲಿ<br>2) ಕಾನಿ೩ಂ.ಲೋ೩ ವಿಭಾಗ ಬಾಗಲಕೋಟೆ ಕಛೇರಿಯಲ್ಲಿ |

ಟೆಂಡರ್‌ಗಳನ್ನು ಸ್ವೀಕರಿಸಿದ ದಿನಾಂಕದಂದು ಅಥವಾ ಮುಂದೆ ಯಾವುದಾದರೂ ಅನುಕೂಲಕರ ದಿನಾಂಕದಂದು ತೆರೆಯಲಾಗುವುದು.

**ಟಿಪ್ಪಣಿ:** ಮೇಲೆ ನಮೂದಿಸಿದ ದಿನಾಂಕಗಳು ಸಾರ್ವತ್ರಿಕ ರಜಾ ದಿವಸವೆಂದು ಘೋಷಿಸಿದಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.

**ಡಿ.ಎನ್. ಮರೋಳ**
ಪಿ.ಆರ್. 702 ಕಾರ್ಯನಿರ್ವಾಹಕ ಇಂಜೀನಿಯರರು,
(ಲೋ೩) ಬಾಗಲಕೋಟೆ ವಿಭಾಗ, ಬಾಗಲಕೋಟೆ.

**ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ ವಿಭಾಗ, ಬಾಗಲಕೋಟೆ ಇವರ ಕಛೇರಿ**

**ಅಲ್ಪಾವಧಿ ಗುತ್ತಿಗೆ ಆಹ್ವಾನ ಪತ್ರಿಕೆ**

**ಸಂಖ್ಯೆ: ಲೋ೩:ಬಾವಿ:ರಸ್ತೆ:ಕಿ೩ಂ:2003-04/2092, ದಿನಾಂಕ: 28ನೇ ಅಕ್ಟೋಬರ್ 2003**

ಕರ್ನಾಟಕ ರಾಜ್ಯಪಾಲರ ಪರವಾಗಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಯವರಿಂದ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಣಿ ಮಾಡಿಸಿದ ಅರ್ಹ ಗುತ್ತಿಗೆದಾರರಿಂದ ಕೆಳಗೆ ನಮೂದಿಸಿದ ಕಾಮಗಾರಿಗಳಿಗೆ ಐಟಂವಾರು ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಕೆಲಸದ ಹೆಸರನ್ನು ನಮೂದಿಸಿ ಮೊಹರು ಬಂದ್ ಮಾಡಿದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ಅನುಸೂಚಿತ ಅವಧಿ ಮತ್ತು ವೇಳೆಯಲ್ಲಿ ಸ್ವೀಕರಿಸಲಾಗುವುದು. ಅವುಗಳನ್ನು ಗುತ್ತಿಗೆದಾರರ ಅಥವಾ ಅವರ ಪ್ರತಿನಿಧಿಗಳ ಹಾಜರಾತಿಯಲ್ಲಿ ಅಂದೇ ಅಥವಾ ಮುಂದಿನ ಯಾವುದಾದರೂ ಕೆಲಸದ ಅವಧಿಯಲ್ಲಿ ತೆರೆಯಲಾಗುವುದು.

ಗುತ್ತಿಗೆದಾರರು ಟೆಂಡರುಗಳನ್ನು ಸಾಮಾನ್ಯ ನಿಯಮಗಳಲ್ಲಿ ಸೂಚಿಸಿದ ವಿವರಗಳನ್ನೊಳಗೊಂಡಿರುವಂತೆ, ಎಲ್ಲ ದಾಖಲೆಗಳನ್ನು ಅರ್ಜಿಯೊಂದಿಗೆ ನಿಗದಿತ ಅವಧಿಯಲ್ಲಿ ಸಲ್ಲಿಸಬೇಕು.

| ಅ. ನಂ | ಕೆಲಸದ ಹೆಸರು | ಟೆಂಡರಿ ಗಿಟ್ಟಿರುವ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಮುಂಗಡ ಠೇವಣಿ ಹಣ ಟೆಂಡರ್ ನಿಯಮಾವಳಿ ಯಂತೆ ರೂಪಾಯಿ | ಟೆಂಡರ್ ಫಾರಂ ಬೆಲೆ ರೂ. (ಹಿಂದಿರುಗಿಸ ಲಾಗುವುದಿಲ್ಲ) | ಕೆಲಸವನ್ನು ಮುಗಿಸಲು ಕಾಲಮಿತಿ | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | ಲೆಕ್ಕಶೀರ್ಷಿಕೆ 3054 ರಸ್ತೆ ಮತ್ತು ಸೇತುವೆ (ಯೋಜನೇತರ) ಅಡಿಯಲ್ಲಿ ಬಾಗಲಕೋಟೆ ಜಿಲ್ಲೆ, ಹುನಗುಂದ ತಾಲ್ಲೂಕಿನ ಕಮತಗಿ ಮುಗನೂರ ರಸ್ತೆ ಕಿ.ಮೀ. 5.50 ರಿಂದ 6.80ರ ವರೆಗೆ ಡಾಂಬರೀಕರಣ ಮಾಡುವುದು. | 6.50 | 13,000.00 | 1160.00 ಟ್ಯಾಕ್ಸ್ ಸಹಿತ | 6 ತಿಂಗಳು (ಮಳೆಗಾಲ ಸಹಿತ) | 3ನೇ ದರ್ಜೆ ಮತ್ತು ಮೇಲ್ಪಟ್ಟು |

**ಸಾಮಾನ್ಯ ವಿವರಣೆಗಳು:**

1. ಗುತ್ತಿಗೆದಾರರು ಇಂಥದೆ ಆದ ಕಾಮಗಾರಿಗಳನ್ನು ಪ್ರತಿ ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಮೊತ್ತದ ಕಾಮಗಾರಿಗಳನ್ನು ಹಿಂದಿನ 5 ಆರ್ಥಿಕ ವರ್ಷಗಳಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರ್ತಿಗೊಳಿಸಿರಬೇಕು. (ಕಾಮಗಾರಿ ಮೊತ್ತವನ್ನು ಕಾಮಗಾರಿ ಪೂರ್ತಿಗೊಂಡ ಆರ್ಥಿಕ ವರ್ಷದಿಂದ ಈ ವರ್ಷದವರೆಗೆ ಶೇಕಡಾ 10 ರಂತೆ ಪ್ರತಿ ವರ್ಷಕ್ಕೆ ಲೆಕ್ಕ ಹಾಕುವುದು) ಅಲ್ಲದೆ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಕಾಮಗಾರಿಯನ್ನು ಕೈಗೊಂಡಿದ್ದರೆ ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಹಣ ಪಾವತಿ ಆಗಿರಬೇಕು.

2. ಕೆಲಸಕ್ಕೆ ಬೇಕಾದ ಎಲ್ಲ ಸಾಮಗ್ರಿಗಳನ್ನು ಗುತ್ತಿಗೆದಾರರೇ ತಂದು ನಿರ್ವಹಿಸಬೇಕು. ಹಾಗೂ ಡಾಂಬರೀಕರಣ ಮಾಡುವಾಗ ಹಾಟ್‌ಮಿಕ್ಸ್ ಪ್ಲಾಂಟ್ ಪೇವರ್ ಫಿನಿಶರ್ ಉಪಯೋಗಿಸಬೇಕು. ಇಲಾಖೆ ವತಿಯಿಂದ ಯಾವುದೇ ಸಾಮಗ್ರಿಗಳನ್ನು ಪೂರೈಸಲಾಗುವುದಿಲ್ಲ.

ಗುತ್ತಿಗೆದಾರರು ಪೂರೈಸುವ ಸಾಮಗ್ರಿಗಳನ್ನು ಸೂಚಿಸಿದ ಪರೀಕ್ಷಣಾ ಕೇಂದ್ರದಲ್ಲಿ ತಮ್ಮ ಸ್ವಂತ ಖರ್ಚಿನಲ್ಲಿ ಪರೀಕ್ಷಿಸಿಕೊಂಡು ಸಂಬಂಧಪಟ್ಟ ಅಧಿಕಾರಿಗಳಿಗೆ ಪ್ರಮಾಣ ಪತ್ರವನ್ನು ಸಲ್ಲಿಸಿ ಅನುಮತಿ ಪಡೆದುಕೊಂಡು ಸಾಮಗ್ರಿಗಳನ್ನು ಕೆಲಸಕ್ಕೆ ಉಪಯೋಗಿಸಬೇಕಾಗುತ್ತದೆ.

3. ಮೇಲೆ ನಮೂದಿಸಿದ ಕೆಲಸದ ಟೆಂಡರ್‌ಗಳಲ್ಲಿ ಭಾಗವಹಿಸಲಿಚ್ಚಿಸುವ ಗುತ್ತಿಗೆದಾರರು ನಿಗದಿತ ಟೆಂಡರ್ ಫಾರ್ಮ್ ಬೆಲೆಯನ್ನು ನಗದು ರೂಪದಲ್ಲಿ ಅಥವಾ ಡಿಮ್ಯಾಂಡ್ ಡ್ರಾಫ್ಟ್‌ನ್ನು ಕಾರ್ಯನಿರ್ವಾಹಕ ಇಂಜಿನಿಯರರು ಲೋಕೋಪಯೋಗಿ ಇಲಾಖೆ ವಿಭಾಗ ಬಾಗಲಕೋಟೆ ಇವರ ಹೆಸರಿನಲ್ಲಿ ಬಾಗಲಕೋಟದಲ್ಲಿ ಹಣ ಪಾವತಿಯಾಗುವಂತೆ ಡಿ.ಡಿ. ಯನ್ನು ಈ ಕೆಳಗೆ ನಮೂದಿಸಿದ ದಿನಾಂಕದಂದು ಅರ್ಜಿಯೊಂದಿಗೆ ಸಲ್ಲಿಸಬೇಕು.

4. ಯಾವುದೇ ಅಥವಾ ಎಲ್ಲ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೆ ನಿರಾಕರಿಸುವ ಹಕ್ಕನ್ನು ಟೆಂಡರ್‌ಗಳನ್ನು ನಿರ್ಧರಿಸುವ ಅಧಿಕಾರಿಗಳು ಕಾಯ್ದಿರಿಸಿಕೊಂಡಿದ್ದಾರೆ.

5. ಗುತ್ತಿಗೆದಾರರು ಫೈನಾನ್ಸಿಯಲ್ ಬಿಡ್‌ನಲ್ಲಿ ಐಟಂವಾರು ದರಗಳನ್ನು ಅಂಕಿಯಲ್ಲಿ ಮತ್ತು ಅಕ್ಷರಗಳಲ್ಲಿ ತಪ್ಪದೇ ನಮೂದಿಸಬೇಕು ಮತ್ತು ಮೊಹರು ಮಾಡಿ ಸಲ್ಲಿಸಬೇಕು.

6. ಸದರಿ ಕೆಲಸದ ಟೆಂಡರಿಗೆ ನಮೂದಿಸಿದ ಮುಂಗಡ ಠೇವಣಿ ಹಣವನ್ನು ರಾಷ್ಟ್ರೀಕೃತ : ಶೆಡ್ಯೂಲ್ ಬ್ಯಾಂಕ್ ನಿಂದ ಡಿಮ್ಯಾಂಡ್ ಡ್ರಾಫ್ಟ್ : ಕಾಲ್ ಡಿಪಾಜಿಟ್ ನಗದು ರಶೀದಿಯನ್ನು ಕಾರ್ಯನಿರ್ವಾಹಕ ಇಂಜಿನೀಯರರು ಲೋಇ ವಿಭಾಗ ಬಾಗಲಕೋಟೆ ಇವರ ಹೆಸರಿನಲ್ಲಿ ಪಡೆದು ಟೆಂಡರ್ ಜೊತೆಗೆ ಲಗತ್ತಿಸಿ ಸಲ್ಲಿಸಬೇಕು. ಬ್ಯಾಂಕ್ ಗ್ಯಾರಂಟಿಯನ್ನು ತೆಗೆದುಕೊಂಡಲ್ಲಿ ನಿಗದಿತ ನಮೂನೆಯಲ್ಲಿ ಕೆಲಸದ ಹೆಸರು ನಮೂದಿಸಿ ಸಲ್ಲಿಸಬೇಕು. ರಾಷ್ಟ್ರೀಯ ಉಳಿತಾಯ ಪತ್ರಗಳನ್ನು ಸಲ್ಲಿಸಬಯಸುವವರು ಈ ಕೆಳಗೆ ಸಹಿ ಮಾಡಿದ ಅಧಿಕಾರಿಯವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಿ ಲಗತ್ತಿಸಬೇಕು. ತಪ್ಪಿದಲ್ಲಿ ಅಂಥವರ ಗುತ್ತಿಗೆಯನ್ನು ತಿರಸ್ಕರಿಸಲಾಗುವುದು.

7. **ಟೆಂಡರ್ ಅವಧಿ ಈ ಕೆಳಗಿನಂತಿವೆ:**

| | | | |
|---|---|---|---|
| ಅ) | ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ | : | 11.11.2003ರ ವರೆಗೆ ಮತ್ತು ಅದಕ್ಕಿಂತ ಮೊದಲು ಬೆಳಿಗ್ಗೆ 10.00 ಗಂಟೆಯಿಂದ 5.30 ಗಂಟೆವರೆಗೆ ಮಾತ್ರ. |
| ಬ) | ಖುಲ್ಲಾ ಟೆಂಡರ್ ಫಾರ್ಮ್‌ಗಳನ್ನು ಪೂರೈಸುವ ದಿನಾಂಕ | : | 15.11.2003 ರಂದು ಕಛೇರಿ ವೇಳೆಯಲ್ಲಿ ಮಾತ್ರ. |
| ಕ) | ಟೆಂಡರ್‌ಗಳನ್ನು ಸಲ್ಲಿಸುವ ದಿನಾಂಕ | : | 19.11.2003 ರಂದು ಸಾಯಂಕಾಲ 4.00 ಗಂಟೆ ವರೆಗೆ. |
| ಡ) | ಟೆಂಡರ್‌ಗಳನ್ನು ತೆರೆಯುವ ದಿನಾಂಕ | : | 19.11.2003 ರಂದು ಅಥವಾ ಮುಂದೆಯಾವುದಾದರೂ ಅನುಕೂಲಕರ ದಿನಾಂಕದಂದು ತೆರೆಯಲಾಗುವುದು. |

ಟೆಂಡರ್‌ಗಳನ್ನು ಸ್ವೀಕರಿಸಿದ ದಿನಾಂಕದಂದು ಅಥವಾ ಮುಂದೆ ಯಾವುದಾದರೂ ಅನುಕೂಲಕರ ದಿನಾಂಕದಂದು ತೆರೆಯಲಾಗುವುದು.

**ಟಿಪ್ಪಣಿ:** ಮೇಲೆ ನಮೂದಿಸಿದ ದಿನಾಂಕಗಳು ಸಾರ್ವತ್ರಿಕ ರಜಾ ದಿವಸವೆಂದು ಘೋಷಿಸಿದಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.

**ಡಿ.ಎನ್. ಮರೋಳ**
ಪಿ.ಆರ್. 703
ಕಾರ್ಯನಿರ್ವಾಹಕ ಇಂಜಿನೀಯರರು,
(ಲೋಇ) ಬಾಗಲಕೋಟೆ ವಿಭಾಗ, ಬಾಗಲಕೋಟೆ.

## ಪಶುಪಾಲನಾ ಮತ್ತು ಪಶುವೈದ್ಯಸೇವಾ ಇಲಾಖೆ

## ಉಪ ನಿರ್ದೇಶಕರ ಕಛೇರಿ, ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89

## ಅಮರಾಯಿ ಫಸಲಿನ ಬಹಿರಂಗ ಹರಾಜು ಇಸ್ತಿಹಾರ್

**ಸಂಖ್ಯೆ: ಉನಿ:ಜಾಸಂಕ್ಷೇ:ಸಿ3:ಅಮಫ:ಹರಾಜು:2003-04, ದಿನಾಂಕ: 3ನೇ ನವೆಂಬರ್ 2003**

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರುವುದೇನೆಂದರೆ ಈ ಕ್ಷೇತ್ರಕ್ಕೆ ಸೇರಿದ ಈ ಕೆಳಗೆ ನಮೂದಿಸಿರುವ ಮರಗಳಲ್ಲಿರುವ ಫಸಲನ್ನು ದಿನಾಂಕ: 17.12.2003ನೇ ಬುಧವಾರ ಬೆಳಿಗ್ಗೆ 11.00 ಗಂಟೆಗೆ ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89 ರಲ್ಲಿನ ಕಛೇರಿ ಆವರಣದಲ್ಲಿ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

**ಹರಾಜಿನ ವಿವರ**

| | | | |
|---|---|---|---|
| 1) | ಹುಣಸೆ ಫಸಲು | - | 304 ಮರಗಳ ಫಸಲು |
| 2) | ಹೊಂಗೆ ಫಸಲು | - | 75 ಮರಗಳ ಫಸಲು |
| 3) | ಹಿಪ್ಪೆ ಫಸಲು | - | 14 ಮರಗಳ ಫಸಲು |
| 4) | ಬೇವಿನ ಫಸಲು | - | 193 ಮರಗಳ ಫಸಲು |

**ನಿಬಂಧನೆಗಳು**

1) ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗೆ ಮೊದಲು ರೂಪಾಯಿ 2000-00 (ರೂಪಾಯಿ ಎರಡು ಸಾವಿರ ಮಾತ್ರ) ಗಳನ್ನು ಠೇವಣಿ ಹಣವನ್ನು ನಗದು ರೂಪದಲ್ಲಿ ಸಂದಾಯ ಮಾಡಿ ಹರಾಜಿನಲ್ಲಿ ಭಾಗವಹಿಸತಕ್ಕದ್ದು. ಈ ಹಣವನ್ನು ಹೆಚ್ಚು ಬಿಡ್ಡು ಮಾಡಿದವರನ್ನು ಹೊರತುಪಡಿಸಿ ಹರಾಜು ಮುಗಿದ ನಂತರ ಹಿಂದಿರುಗಿಸಲಾಗುವುದು.

2) ಯಶಸ್ವಿ ಹರಾಜುದಾರರು ಪೂರ್ಣ ಮೊಬಲಗನ್ನು ಮತ್ತು ಸಂಬಂಧಪಟ್ಟ ಇತರೆ ತೆರಿಗೆಗಳ ಸಹಿತ ತಕ್ಷಣವೇ ಪಾವತಿ ಮಾಡಿ ರಸೀದಿ ಪಡೆಯತಕ್ಕದ್ದು. ತಪ್ಪಿದ್ದಲ್ಲಿ ಠೇವಣಿಯನ್ನು ದಂಡವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಪುನಃ ಹರಾಜು ಮಾಡಲಾಗುವುದು. ಆದರಿಂದ ಆದ ನಷ್ಟದ ಮೊಬಲಗನ್ನು ಮೊದಲನೆಯ ಯಶಸ್ವಿ ಹರಾಜುದಾರರಿಂದಲೇ ರೆವಿನ್ಯೂ ಬಾಕಿಯೆಂದು ಪರಿಗಣಿಸಿ ವಸೂಲಿ ಮಾಡಲಾಗುವುದು. ಲಾಭವೇನಾದರೂ ಬಂದಲ್ಲಿ ಅದಕ್ಕೆ ಅವರು ಅರ್ಹರಾಗಿರುವುದಿಲ್ಲ.

3) ಹರಾಜಿನಲ್ಲಿ ಕೊಂಡ ಫಸಲನ್ನು ಎಲ್ಲ ವಿಧದಲ್ಲಿಯೂ ಕಾಪಾಡಿಕೊಳ್ಳುವ ಜವಾಬ್ದಾರಿಯು ಫಸಲನ್ನು ಕೊಂಡವರಿಗೆ ಸೇರಿರುತ್ತದೆ. ಈ ಬಗ್ಗೆ ಯಾವ ವಿಧವಾದ ದೂರುಗಳನ್ನು ಸ್ವೀಕರಿಸಲಾಗುವುದಿಲ್ಲ.

4) ಸರ್ಕಾರದ ಸ್ವತ್ತಿಗೆ ಯಾವ ವಿಧವಾದ ನಷ್ಟಗಳೇನಾದರೂ ಆದರೆ ಹರಾಜುದಾರನ ಸ್ವಂತ ಖರ್ಚಿನಿಂದ ಸರಿಪಡಿಸಬೇಕು. ಹಾಗೂ ಈ ಬಾಬ್ತು ಅನುಭವಿಸುವ ದಿನಾಂಕದವರೆಗೆ ಮುಂಗಡ ಠೇವಣಿ (ಕಾಷನ್ ಡಿಪಾಸಿಟ್) ಆಗಿ ರೂಪಾಯಿ 5,000-00 (ರೂಪಾಯಿ ಐದು ಸಾವಿರ ಮಾತ್ರ) ಹಣ ಪಾವತಿಸಬೇಕು.

5) ಹರಾಜನ್ನು ಈ ಇಲಾಖೆಯ ಜಂಟಿ ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯಸೇವಾ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು ಇವರಿಂದ ಅಥವಾ ಇವರಿಂದ ನೇಮಿಸಲ್ಪಟ್ಟವರಿಂದ ನಡೆಸಲಾಗುವುದು. ಹರಾಜಿನ ಯಾವ ಅಂತಿಮ ನಿರ್ಧಾರವು ಹರಾಜು ನಡೆಸುವ ಅಧಿಕಾರಿಗಳಿಗೆ ಸೇರಿರುತ್ತದೆ.

6) ಹರಾಜನ್ನು ಯಾವ ಕಾರಣವನ್ನು ನೀಡದೇ ಯಾವ ಸಂದರ್ಭದಲ್ಲಾದರೂ ರದ್ದು ಮಾಡುವ ಅಧಿಕಾರ ಹರಾಜು ನಡೆಸುವ ಅಧಿಕಾರಿಗಳಿಗೆ ಸೇರಿರುತ್ತದೆ.

7) ಹೆಚ್ಚಿನ ಮಾಹಿತಿಗಾಗಿ ಉಪ ನಿರ್ದೇಶಕರು, ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89 ಇವರ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

8) ಈ ಹರಾಜಿನಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಿ ನೌಕರರು ಭಾಗವಹಿಸುವಂತಿಲ್ಲ.

**ಡಾ: ಎಂ.ಎ. ಎಜಾಜ್ ಅಹಮದ್**

ಪಿ.ಆರ್. 699

ಉಪ ನಿರ್ದೇಶಕರು,

ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89.

## ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು-560 001

## ಟೆಂಡರ್-ಕಂ-ಬಹಿರಂಗ ಹರಾಜು

**ಕ್ರಮಾಂಕ: ಲೋಕ್/ವಾಹನಗಳ ಅನುಪಯುಕ್ತತೆ/2003-04, ದಿನಾಂಕ: 28ನೇ ಅಕ್ಟೋಬರ್ 2003**

ಕರ್ನಾಟಕ ಲೋಕಾಯುಕ್ತ ಕಛೇರಿಯ ಈ ಕೆಳಕಂಡ ವಾಹನಗಳನ್ನು ಟೆಂಡರ್ ಮತ್ತು ಬಹಿರಂಗ ಹರಾಜು ಮೂಲಕ ವಿಲೇ ಮಾಡಲಾಗುವುದು.

| ಕ್ರ.ಸಂ. | ವಾಹನ ಸಂಖ್ಯೆ | ಮಾದರಿ | ತಯಾರಿಕೆ ವರ್ಷ | ವಾಹನವಿರುವ ಸ್ಥಳ |
|---|---|---|---|---|
| 1 | ಎಂ.ಇ.ಟಿ. - 6032 | ಅಂಬಾಸಿಡರ್ (ಪೆಟ್ರೋಲ್) | 1978 | ಕರ್ನಾಟಕ ಲೋಕಾಯುಕ್ತ, ಗುಲ್ಬರ್ಗಾ. |
| 2 | ಸಿಎಜಿ - 262 | ಜೀಪು (ಡೀಸೆಲ್) | 1981 | ಕರ್ನಾಟಕ ಲೋಕಾಯುಕ್ತ, ಚಿತ್ರದುರ್ಗ. |
| 3 | ಸಿಎಜಿ -274 | ಜೀಪು (ಡೀಸೆಲ್) | 1981 | ಕರ್ನಾಟಕ ಲೋಕಾಯುಕ್ತ, ಮೈಸೂರು. |

ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಭಾಗವಹಿಸತಕ್ಕದ್ದು.

1) ಆಸಕ್ತಿಯುಳ್ಳ ವ್ಯಕ್ತಿಗಳು ಮೇಲೆ ತಿಳಿಸಿದ ವಾಹನಗಳ ಸಂಬಂಧವಾಗಿ ಮೊಹರಾದ ಲಕೋಟೆಗಳಲ್ಲಿ ತಮ್ಮ ಟೆಂಡರ್‌ಗಳನ್ನು ಮಾತ್ರ (ಡಿ.ಡಿ. ಹೊರತುಪಡಿಸಿ) ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು - 560 001 ಇವರಿಗೆ ದಿನಾಂಕ: 30.11.2003 ರಂದು 4.00 ಗಂಟೆಗೆ ಅಥವಾ ಅದಕ್ಕೂ ಮುಂಚೆ ತಲುಪುವಂತೆ ಸಲ್ಲಿಸಬೇಕು.

2) ಹರಾಜು ಮಾರಾಟವು ದಿನಾಂಕ: 10.12.2003 ರಂದು ಬೆಳಿಗ್ಗೆ 11.00 ಗಂಟೆಗೆ ಮೇಲೆ ತಿಳಿಸಿದ ಕಛೇರಿ ಆವರಣದಲ್ಲಿ ಪ್ರಾರಂಭವಾಗುವುದು. ಆಸಕ್ತಿಯುಳ್ಳ ಸವಾಲುಗಾರರು ಸಾರ್ವತ್ರಿಕ ರಜೆಯನ್ನು ಹೊರತುಪಡಿಸಿ ಬೆಳಿಗ್ಗೆ 11.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ ವಾಹನಗಳನ್ನು ಈ ಕಛೇರಿಯ ಆವರಣದಲ್ಲಿ ಪರೀಕ್ಷಿಸಬಹುದು. ಮೇಲೆ ತಿಳಿಸಿದ ವಾಹನದ ಬಗ್ಗೆ ಯಾವುದೇ ಖಾತರಿಯನ್ನು ನೀಡಲಾಗುವುದಿಲ್ಲ. ವಾಹನವನ್ನು ಇದ್ದಲ್ಲಿ ಇದ್ದಂತೆಯೇ ವಿಲೇವಾರಿ ಮಾಡಲಾಗುವುದು ಮತ್ತು ಹಾಗೆಯೇ ತೆಗೆದುಕೊಂಡು ಹೋಗಬೇಕು. ಈ ಸಂಬಂಧವಾಗಿ ಯಾವುದೇ ಪತ್ರ ವ್ಯವಹಾರಗಳನ್ನು ಪುರಸ್ಕರಿಸುವುದಿಲ್ಲ.

3) ಟೆಂಡರನ್ನು ಮೊಹರಾದ ಲಕೋಟೆಯ ಮೇಲೆ ಟೆಂಡರ್ ವಾಹನ ಸಂಖ್ಯೆಯನ್ನು ನಮೂದಿಸಿದ ಮೇಲ್ಬರಹ ಬರೆದು ಸಲ್ಲಿಸಬೇಕು.

4) ಟೆಂಡರಿನ ಮುಂಗಡ ಹಣವನ್ನು ಠೇವಣಿಯಾಗಿ (ಇ.ಎಂ.ಡಿ.) ಕಾರಿಗೆ ರೂ.5,000/- (ರೂ.ಐದು ಸಾವಿರ) ಮಾತ್ರ ಮುಂಗಡವಾಗಿ ಪ್ರತ್ಯೇಕವಾಗಿ ಡಿ.ಡಿ. ಮುಖಾಂತರ ಮೇಲೆ ತಿಳಿಸಿದ ನಿಬಂಧಕರ ಹೆಸರಿನಲ್ಲಿ ಸಲ್ಲಿಸಬೇಕು. (ಟೆಂಡರ್ ಲಕೋಟೆಯಲ್ಲಿ ಡಿ.ಡಿ.ಯನ್ನು ಇರಿಸಕೂಡದು) ಮತ್ತು ಡಿ.ಡಿ. ನೀಡಿದ್ದಕ್ಕೆ ಸ್ವೀಕೃತಿ ರಶೀತಿಯನ್ನು ಪಡೆಯತಕ್ಕದ್ದು. ಈ ಮುಂಗಡ ಠೇವಣಿಗೆ ಯಾವುದೇ ಬಡ್ಡಿ ನೀಡಲಾಗುವುದಿಲ್ಲ.

5) ಠೇವಣಿ ಹಣವನ್ನು (ಡಿ.ಡಿ.) ಅತೀ ಹೆಚ್ಚಿನ ಅಂತಿಮ ಬಹಿರಂಗ ಹರಾಜು ಮತ್ತು ಟೆಂಡರ್‌ದಾರರೆಂದು, ಪರಿಗಣಿಸಿ ಉಳಿದವರಿಗೆ ಠೇವಣಿ ಹಣವನ್ನು (ಡಿ.ಡಿ.) ಹರಾಜು ಮುಗಿದ ನಂತರ ಸ್ಥಳದಲ್ಲಿಯೇ ಹಿಂತಿರುಗಿಸಲಾಗುವುದು.

6) ಮುಂಗಡ ಹಣ ಠೇವಣಿ (ಡಿ.ಡಿ.) ಹೊಂದಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
7) ಟೆಂಡರ್ ಯಾವುದೇ ಷರತ್ತು ಹೊಂದಿರತಕ್ಕದ್ದಲ್ಲ ಮತ್ತು ಷರತ್ತು ಹೊಂದಿದ್ದರೆ ಅವುಗಳನ್ನು ತಿರಸ್ಕರಿಸಲಾಗುವುದು.
8) ಅತಿ ಹೆಚ್ಚಿನ ಬಹಿರಂಗ ಮತ್ತು ಟೆಂಡರ್‌ದಾರರು ಸ್ಥಳದಲ್ಲಿಯೇ ಹರಾಜಿನ ಮೂಲಕ ಪೂರ್ತಿ ಹಣವನ್ನು ನಗದಾಗಿ ಪಾವತಿಸತಕ್ಕದ್ದು.
9) ಮೊದಲನೇ ಅತೀ ಹೆಚ್ಚಿನ ಅಂತಿಮ ಬಹಿರಂಗ ಹರಾಜು-ಕಂ-ಟೆಂಡರ್‌ದಾರರು ಪೂರ್ವಾಹ್ನ ಪಾವತಿಸಿದ ನಂತರವೇ ಎರಡನೇ ಅತಿ ಹೆಚ್ಚಿನ ಅಂತಿಮ ಬಹಿರಂಗ ಹರಾಜು-ಕಂ-ಟೆಂಡರ್‌ದಾರರ ಹಣವನ್ನು ವಾಪಸ್ಸು ಮಾಡಲಾಗುವುದು. ಒಂದು ವೇಳೆ ಮೊದಲನೇ ಅತೀ ಹೆಚ್ಚಿನ ಅಂತಿಮ ಬಹಿರಂಗ ಹರಾಜು-ಕಂ-ಟೆಂಡರ್‌ದಾರರು ಪೂರ್ಣ ಹಣ ಪಾವತಿಸದೆ ಇದ್ದಲ್ಲಿ ಅದೇ ದಿನ ಎರಡನೇ ಬಿಡ್ಡುದಾರರು ಆರ್.ಟಿ.ಓ. ರವರು ನಿಗದಿಪಡಿಸಿದ ಹಣಕ್ಕಿಂತ ಹೆಚ್ಚಿಗೆ ಬಹಿರಂಗ ಹರಾಜು ಮತ್ತು ಟೆಂಡರ್ ಇದ್ದಲ್ಲಿ ನೀಡಲಾಗುವುದು.
10) ಹರಾಜು-ಕಂ-ಟೆಂಡರ್ ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಹರಾಜು-ಕಂ-ಟೆಂಡರ್ ಪ್ರಕ್ರಿಯೆ ನಡೆಸುವ ಪ್ರಾಧಿಕಾರಕ್ಕೆ ಸೇರುತ್ತದೆ.
11) ಹರಾಜು-ಕಂ-ಟೆಂಡರ್ ಪ್ರಾರಂಭವಾಗುವ ಸಮಯಕ್ಕೆ ಎಲ್ಲಾ ಬಿಡ್ಡುದಾರರು ಭಾಗವಹಿಸತಕ್ಕದ್ದು. ಕಂಡಿಕೆ (2) ತಿಳಿಸಿರುವಂತೆ ಹರಾಜು ಪ್ರಕ್ರಿಯೆ ಮುಗಿದ ನಂತರ ಬಂದ ಸವಾಲುದಾರರಿಗೆ ಯಾವುದೇ ಹಕ್ಕು ಇರುವುದಿಲ್ಲ.
12) ಯಶಸ್ವಿ ಟೆಂಡರ್‌ದಾರ:ಸವಾಲುಗಾರನು ಸವಾಲಿನ ಬೆಲೆಯನ್ನು ಅದೇ ದಿನ ನಗದು ಅಥವಾ ಡಿ.ಡಿ. ಮೂಲಕ ಪಾವತಿಸತಕ್ಕದ್ದು. ತಪ್ಪಿದಲ್ಲಿ ಠೇವಣಿಯಾಗಿಟ್ಟ ಮುಂಗಡ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ. ಮಾರಾಟವಾಗಿರುವ ಅಂದರೆ ಸಂದಾಯ ಮಾಡಿ ತೆಗೆದುಕೊಂಡು ಹೋಗದ ವಾಹನ ಕರ್ನಾಟಕ ಲೋಕಾಯುಕ್ತದ ಆಸ್ತಿಯಾಗುತ್ತದೆ ಮತ್ತು ಈ ಇಲಾಖೆಯು ಅಂತಹ ವಾಹನವನ್ನು ಸೂಕ್ತವೆಂದು ಭಾವಿಸುವ ಯಾವುದೇ ವಿಭಾಗದಲ್ಲಿ ಯಾವುದೇ ಪೂರ್ವ ನೋಟೀಸು ನೀಡದೆ ಮಾರಾಟ ಮಾಡುವ ಹಕ್ಕನ್ನು ಹೊಂದಿರುತ್ತದೆ.
13) ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಮಾರಾಟವನ್ನು ಖಚಿತಪಡಿಸಿದ ನಂತರ ಮಾರಾಟವು ಪೂರ್ಣಗೊಳ್ಳುತ್ತದೆ.
14) ಕರ್ನಾಟಕ ಮಾರಾಟ ತೆರಿಗೆ, ಕೇಂದ್ರ ಮಾರಾಟ ತೆರಿಗೆ (ಸಂದರ್ಭಾನುಸಾರ) ಪ್ರಚಲಿತ ದರದಂತೆ ಅನ್ವಯವಾಗುವಂತೆ ಅದೇ ದಿನ ಪಾವತಿಸಬೇಕು. ಟೆಂಡರ್-ಕಂ-ಹರಾಜು ಹಣ ಮತ್ತು ಇದಕ್ಕೆ ಅನ್ವಯವಾಗುವಂತೆ ತೆರಿಗೆಗಳು ಪ್ರತ್ಯೇಕವಾಗಿರುತ್ತವೆ.
15) ಸಂದಾಯ : ವಶಾವಣೆ : ಎಲ್ಲ ತೆರಿಗೆ : ಕೇಂದ್ರ ಮಾರಾಟ ತೆರಿಗೆಗಳು ಮತ್ತು ಸುಂಕಗಳು ಪ್ರತ್ಯೇಕವಾಗಿರತಕ್ಕದ್ದು. ವಾಹನಗಳ ಹಣ ಸಂದಾಯ ವಶಾವಣೆ ಪಡೆಯುವ ಸಂದರ್ಭದಲ್ಲಿ ಅನ್ವಯವಾಗುವ ತೆರಿಗೆಗಳ ಜೊತೆಗೆ ಟೆಂಡರ್-ಕಂ-ಹರಾಜು ಹಣವನ್ನು ನಿಬಂಧಕರು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ಸಂದಾಯ ಮಾಡತಕ್ಕದ್ದು. ತೆರಿಗೆಗಳ ಜೊತೆಗೆ ಟೆಂಡರ್ ಹಾಗೂ ಮಾರಾಟದಿಂದ ಬಂದ ಹಣವನ್ನು ಸಂದಾಯ ಮಾಡಿ ನಿಬಂಧಕರು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರಿಂದ ಪಡೆದ ವಶಾವಣೆ ಆದೇಶವನ್ನು ಪಡೆದ ನಂತರವೇ ವಾಹನವನ್ನು ತೆಗೆದುಕೊಂಡು ಹೋಗಲು ಅನುಮತಿಸಲಾಗುವುದು.
16) ಕೊಂಡುಕೊಂಡ ವ್ಯಕ್ತಿಯು ತನ್ನ ಪ್ರತಿನಿಧಿಯ ಮೂಲಕ ವಾಹನದ ವರ್ಗಾವಣೆ ಪಡೆದುಕೊಳ್ಳಲು ಇಚ್ಛಿಸಿದಲ್ಲಿ ಅಧಿಕೃತ ಪತ್ರದ ಮೂಲಕ ಸ್ಪಷ್ಟವಾಗಿ ಪ್ರತಿನಿಧಿಯ ಹೆಸರನ್ನು ಸೂಚಿಸಿ, ಯಥೋಚಿತವಾಗಿ ಪ್ರತಿನಿಧಿಯ ಮಾದರಿ ಸಹಿಯನ್ನು ದೃಢೀಕರಿಸತಕ್ಕದ್ದು. ಈ ಇಲಾಖೆಯು ಪ್ರತಿನಿಧಿಯ ಗುರುತಿನ ಬಗ್ಗೆ ಮತ್ತು ಯಾವುದೇ ತಪ್ಪು ವರ್ಗಾವಣೆ ಆದ ಬಗ್ಗೆ ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ.
17) ವಾಹನವನ್ನು ಇದ್ದಲ್ಲಿ ಇದ್ದಂತೆಯೇ ಆಧಾರದ ಮೇಲೆ ಮಾರಾಟ ಮಾಡುವುದರಿಂದ ಕೊಳ್ಳುವವರು ತಮ್ಮೊಂದಿಗೆ ವರ್ಗಾವಣೆ ಆದೇಶದ ಪ್ರತಿಗಳು ಮಾರಾಟ ತೆರಿಗೆಯ ಫಾರಂ ಇತರೇ ಯಾವುದೇ ಚಲನ್‌ಗಳನ್ನು ವ್ಯವಸ್ಥೆ ಮಾಡಿಕೊಳ್ಳುವ ಜವಾಬ್ದಾರಿ ಕೊಳ್ಳುವವರೇ ವ್ಯವಸ್ಥೆ ಮಾಡಿಕೊಳ್ಳತಕ್ಕದ್ದು.
18) ಟೆಂಡರ್-ಕಂ-ಹರಾಜು ಪ್ರಕ್ರಿಯೆ ಮುಗಿದ ನಂತರ (ಕಂಡಿಕೆ 13 ರಲ್ಲಿ ತಿಳಿಸಿರುವಂತೆ) ಆರ್.ಸಿ. ಪುಸ್ತಕ ಮತ್ತು ತೆರಿಗೆ ವಿನಾಯಿತಿ ಪತ್ರಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು (ಕೇಂದ್ರ), ಕೋರಮಂಗಲ, ಬೆಂಗಳೂರು ರವರಿಗೆ ವಾಹನ ವರ್ಗಾವಣೆಗಾಗಿ ಕಳುಹಿಸಲಾಗುವುದು.
19) ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸುವವರು ಈ ಎಲ್ಲ ನಿಯಮದ ಷರತ್ತುಗಳನ್ನು ಒಪ್ಪಿಕೊಳ್ಳಲು ಬದ್ಧರಿದ್ದೇವೆಂದು ಈ ಕಛೇರಿಯ ಟೆಂಡರ್-ಕಂ-ಹರಾಜು ಪುಸ್ತಕದಲ್ಲಿ ಸಹಿ ಮಾಡತಕ್ಕದ್ದು.
20) ಈ ಟೆಂಡರ್-ಕಂ-ಹರಾಜು ಈ ಕಛೇರಿಯ ಪ್ರಾಧಿಕಾರಕ್ಕೆ ಒಳಪಟ್ಟಿರುತ್ತದೆ ಮತ್ತು ಇದರ ಬಗ್ಗೆ ಕುರಿತು ನ್ಯಾಯಾಲಯದಲ್ಲಿ ಪ್ರಶ್ನಿಸುವಂತಿಲ್ಲ.
21) ಹರಾಜಿನಲ್ಲಿ ಬಿಡ್ ಮಾಡಿದ ವಾಹನವನ್ನು ಮೇಲಾಧಿಕಾರಿಗಳಿಂದ ಅನುಮೋದನೆ ಪಡೆದು ತಮಗೆ ತಿಳಿಸಿದ ದಿನಾಂಕದೊಳಗೆ ಈ ಕಛೇರಿಯ ಆವರಣದಿಂದ ತೆಗೆದುಕೊಂಡು ಹೋಗತಕ್ಕದ್ದು.

**ಡಿ. ಕೃಷ್ಣಪ್ಪ**
ನಿಬಂಧಕರು,
ಕರ್ನಾಟಕ ಲೋಕಾಯುಕ್ತ, ಬೆಂಗಳೂರು.

ಪಿ.ಆರ್. 695